

2022

# ನವಗ್ರಹ ಆರಾಧನೆ




ಶ್ರೀದತ್ತ ದಿಕ್ಷಿತ ಓಣಿಕೈ

ಬೆಂಗಳೂರು

# ಶುಭ-ಆಶೀರ್ವಾದಗಳು



**ಪರಮ ಪೂಜ್ಯ ಸದ್ಗುರು ನಾರಾಯನಾಂದ ತೀರ್ಥ ಮಹಾಸ್ವಾಮಿಗಳು**

ಶ್ರೀ ಕ್ಷೇತ್ರ ಔದುಂಬರ, ತಾಲೂಕ ಪಲುಸ, ಜಿಲ್ಲಾ ಸಾಂಗ್ಲಿ - 416320, ಮಹಾರಾಷ್ಟ್ರ

ಪೂರ್ವಾಶ್ರಮ

**ಶ್ರೀ ವೇದಮೂರ್ತಿ ತಿಮ್ಮಣ್ಣ ನರಸಿಂಹ ದಿಕ್ಷಿತ, ಒಣಿಕೈ,**

(02/09/1886 - 15/02/1968)

ಪೋಸ್ಟ: ಪಂಚಲಿಂಗ, ತಾಲೂಕ : ಶಿರಸಿ, ಉತ್ತರಕನ್ನಡ 581403 ಕರ್ನಾಟಕ

ಶ್ರೀ ತಿಮ್ಮಣ್ಣ ಭಟ್ಟ ಮತ್ತು ಶ್ರೀಮತಿ ಯಮುನಾ ಅವರ ಕಿರು ಪರಿಚಯ

ತಿಮ್ಮಣ್ಣ ಭಟ್ಟರು ಭಾದ್ರಪದ ಶುದ್ದ ಪಂಚಮಿ 1808ರಲ್ಲಿ ಜನನ, (ಗುರುವಾರ 2ನೆ ಸೆಪ್ಟಂಬರ್ 1886). 8 ವರ್ಷಕ್ಕೆ ಉಪನಯನ, ಗೋಕರ್ಣದ ಗಾಯತ್ರಿ ತಿಮ್ಮಣ್ಣ ಭಟ್ಟರಲ್ಲಿ ಕೃಷ್ಣ ಯುಜುರ್ವೇದ ಅಭ್ಯಾಸ. ಶ್ರೀ ಶಿವಾನಂದ ಸರಸ್ವತಿ ಶಿಗೆಹಳ್ಳಿ ಅವರ ಸನ್ಯಾಸ ದೀಕ್ಷೆ ಸಮಾರಂಭದ ಪೌರೋಹಿತ್ಯ ವಹಿಸಿದರು. ಕಡಬಾಳದ ಯಮುನಾ ಅವರನ್ನು ಮದುವೆಯಾಗಿ ನರಸಿಂಹ, ಯಜ್ಞನಾರಾಯಣ, ಮಹಾದೇವಿ, ದತ್ತಾತ್ರೇಯ, ದಕ್ಷಿಣಾಮೂರ್ತಿ, ರಾಮಚಂದ್ರ, ಗಂಗಾ ಒಟ್ಟು 7 ಮಕ್ಕಳನ್ನು ಪಡೆದರು ಹಾಗೂ ಅಗ್ನಿಹೋತ್ರವನ್ನು ಶುರು ಮಾಡಿದರು. ಸೋಮಯಾಗ ಯಜ್ಞವನ್ನು ಪೂರೈಸಿ ತಿಮ್ಮಣ್ಣ ದಿಕ್ಷಿತ್ ಎನಿಸಿಕೊಂಡರು. ಚಾತುರ್ಮಾಸ ಯಾಗ ಮತ್ತು ನಕ್ಷತ್ರ ಯಾಗಗಳನ್ನೂ ನೆರವೇರಿಸಿದರು. 30ನೆ ವಯಸ್ಸಿನಲ್ಲಿ ದತ್ತಮಂದಿರವನ್ನು ಸ್ಥಾಪಿಸಿದರು. ಶ್ರೀಧರ ಸ್ವಾಮೀ ಮತ್ತು ಇತರರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಶ್ರಾವಣ ಶುದ್ದ ಪಂಚಮಿ ಬುಧವಾರ 1873 ಶಕೆ (ಆಗಸ್ಟ್ 8 1951) ಔದಂಬರದಲ್ಲಿ ತಾವೇ ಸನ್ಯಾಸ ದೀಕ್ಷೆ ಸ್ವೀಕರಿಸಿ ಶ್ರೀ ನಾರಾಯಣಾನಂದ ತೀರ್ಥರಾದರು. ಟೆಂಬೆ ಮಹಾರಾಜ, ಅವಧೂತ ಸ್ವಾಮಿ, ಅಕ್ಕಲಕೋಟ ಮಹಾರಾಜ ಮುಂತಾದವರ ಒಡನಾಟ. ಔದಂಬರದಲ್ಲಿ ಶ್ರೀ ಗುರು ಶಿವಶಂಕರಾನಂದ ಆಶ್ರಮ ಸ್ಥಾಪನೆ. ದತ್ತಮಂದಿರ ಸ್ಥಾಪನೆ. ಮಾಘ ಬಹುಳ ಪಾಡ್ಯ 1889 ರಂದು ತಮ್ಮ 82ನೆ ವಯಸ್ಸಿನಲ್ಲಿ ಸಮಾಧಿ ಹೊಂದಿದರು. (ಗುರುವಾರ ಫೆಬ್ರವರಿ 15 1968)

# ಪ್ರಕಾಶಕರ ನುಡಿ

ಮನುಷ್ಯನಿಗೆ ಮಾತ್ರ ಧರ್ಮವನ್ನು ಆಚರಿಸುವ ಸಾಮರ್ಥ್ಯವಿರುವುದು. ಧರ್ಮಾಚರಣೆಯಿಂದಲೇ ಒಬ್ಬ ವ್ಯಕ್ತಿಯು ಸುಂದರವಾದ ಬದುಕನ್ನು ತಾನು ಅನುಭವಿಸುವುದಲ್ಲದೆ, ತನ್ನ ಕುಟುಂಬ, ಸಮಾಜ, ದೇಶ ಹೀಗೆ ಎಲ್ಲವನ್ನು ಬೆಳೆಸಿ ಮೋಕ್ಷ ಸಾಧನೆ ಸಾಧ್ಯವಾಗುವುದು. ಧರ್ಮದ ಸ್ವರೂಪವನ್ನು ವೇದಗಳು, ಶಾಸ್ತ್ರಗಳು, ಉಪನಿಷತ್ತುಗಳು, ಪುರಾಣಗಳು ಮುಂತಾದವುಗಳಿಂದ ತಿಳಿಯಬಹುದಾಗಿದೆ. ಅನೂಚಾನವಾಗಿ ಧರ್ಮಾಚರಣೆ ಮುಂದುವರೆಸಲು ನಮ್ಮ ಪೂರ್ವಜರು ಎಲ್ಲ ಸ್ತರಗಳಲ್ಲಿ ವ್ಯಕ್ತಿ, ಕುಟುಂಬ, ಸಮಾಜ, ದೇಶ, ಹಾಗೂ ಎಲ್ಲ ಕಾಲದಲ್ಲಿ ಅಂದರೆ ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೆ, ಹುಟ್ಟಿದಾಗಿನಿಂದ ಸಾಯುವವರೆಗೆ ಮನುಷ್ಯನಾದವನು ಪಾಲಿಸಬೇಕಾದ ನಿಯಮಗಳನ್ನು ರೂಪಿಸಿದ್ದಾರೆ. ಈ ನಿಯಮಗಳು ಎಲ್ಲರಿಗೆ ಎಲ್ಲ ಕಾಲದಲ್ಲಿ ವ್ಯವಸ್ಥಿತವಾಗಿ ಸಿಗುವಂತಾಗಲು, ಸಮಾಜದ ಪ್ರತಿಯೋಬ್ಬನೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುವಿಧದ ಪುರುಷಾರ್ಥಗಳನ್ನು ಪಡೆಯಬೇಕೆಂಬ ಸಂಕಲ್ಪದಿಂದ, ಮಠಮಾನ್ಯಗಳು, ಸಂಘ ಸಂಸ್ಥೆಗಳು, ದೇವಾಲಯಗಳು, ಸನ್ಯಾಸಿಗಳು, ಪುರೋಹಿತರು, ಅರ್ಚಕರು ಹೀಗೆ ಅನೇಕರನ್ನೊಳಗೊಂಡ ಸುಂದರವಾದ ವ್ಯವಸ್ತೆಯನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುವುದೇ ಈ ಸಂಗ್ರಹದ ಉದ್ದೇಶ.

ಕೃಷ್ಣ ಯಜುರ್ವೇದ-ಬೋಧಾಯನೀಯ ಸ್ಮಾರ್ತ ಹವ್ಯಕ ಸಂಪ್ರದಾಯಸ್ಥ ಮನೆತನವಾದ ಓಣಿಕೈ ಕುಟುಂಬವು ಎಲ್ಲ ಧಾರ್ಮಿಕ - ವೈದಿಕ, ಹಬ್ಬ - ಹರಿದಿನಗಳು, ಹಿರಿಯರ ದಿನಗಳನ್ನು ಪೂರ್ವಜರು ಹಾಕಿಕೊಟ್ಟ ಪದ್ಧತಿಯಂತೆ ಅನೂಚಾನವಾಗಿ ನಡೆಸಿಕೊಂಡು ಬರುತ್ತಾ ಇದ್ದಾರೆ . ಅಪಾರ ಆಸ್ತಿಕ ಶಿಷ್ಯರನ್ನೂ ಕಾಲಮಾನಕ್ಕೆ ಅನುಗುಣವಾಗಿ ಅಲ್ಪಸ್ವಲ್ಪ ತಿದ್ದುಪಡಿಗಳೊಂದಿಗೆ ಮಾರ್ಗದರ್ಶಕ ಸ್ಥಾನದಲ್ಲಿ ನಿಂತು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

ನಮ್ಮ ಕುಟುಂಬದವರು ಹಾಗೂ ಶಿಷ್ಯರು, ಬೆಂಗಳೂರು, ಔದುಂಬರ, ಮುಂತಾದ ಊರುಗಳಲ್ಲಿ ನೆಲೆಸಿದ್ದಾರೆ. ಅಲ್ಲಿಯೂ ಧಾರ್ಮಿಕ, ವೈದಿಕ ಆಚಾರ ವಿಚಾರಗಳನ್ನು ಮುಂದುವರಿಸಿಕೊಂಡು ಹೋಗಲು ಅನುಕೂಲವಾಗುವ ನಿಟ್ಟಿನಲ್ಲಿ, ಹಾಗೂ ಈ ಎಲ್ಲಾ ವಿಚಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುವತ್ತ, ಪ ಪೂ ನಾರಾಯಣಾನಂದ ತೀರ್ಥ ಪ್ರತಿಷ್ಠಾನವು ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯಡಿಯಲ್ಲಿ ಪ್ರಕಟಣಾ ಕಾರ್ಯದಲ್ಲಿ ತೊಡಗಿಸಿಕೊಂಡಿದೆ.

ಆಸಕ್ತ ಜನಸಾಮಾನ್ಯರಿಗೆ ಸರಳ ಕನ್ನಡಭಾಷೆಯಲ್ಲಿ, ಚಿಕ್ಕ ಚಿಕ್ಕ ಪ್ರಕಟಣೆಗಳ ಮೂಲಕ ಉಚಿತವಾಗಿ ಒದಗಿಸುವ ಉದ್ದೇಶ ಪ್ರತಿಷ್ಠಾನದ್ದು. ಪ್ರತಿಷ್ಠಾನದ ಈ ಸೇವಾ ಕಾರ್ಯದಲ್ಲಿ ವಿಷಯ ಸಂಗ್ರಹಣೆ, ಸಂಪಾದನೆ, ಕರಡು ಪರಿಷ್ಕರಣೆ, ವಿನ್ಯಾಸ ಹೀಗೆ ಹಲವು ಕೆಲಸಗಳಲ್ಲಿ ಸಲಹೆ, ಸಹಾಯ, ಸಹಕಾರ ನೀಡಿದ ನನ್ನ ತಮ್ಮ ಶ್ರೀ ಕೇಶವ, ಪತ್ನಿ ಶ್ರೀಮತಿ ಭಾಗೀರಥಿ, ಹಾಗೂ ಪ್ರತ್ಯಕ್ಷ-ಪರೋಕ್ಷವಾಗಿ ಪರಿಶ್ರಮಿಸಿದ ಎಲ್ಲರಿಗೂ ಕೃತಜ್ಞತೆಗಳು. ಆಸಕ್ತ ಆಸ್ತಿಕಲೋಕ ಸಹೃಯದಯರಾಗಿ ಸ್ವೀಕರಿಸಬೇಕೆಂದು ಕೋರಿದೆ.

**ಪ್ರಕಾಶಕರು**

# “Navagraha Aradhane”

Smt. Kamala Daxinamurthy Grantha Maalike

Axi – 34

Compiled by

Shridatta Dixit Onikai,
Bengaluru

First Print: 2022



Price: Free

Publisher



**Pa. Pu. Narayanananda Tirtha Pratistana (R)**

No 431, ShriRaksha, 7th Main Road, ISRO Layout,
Bengaluru - 560111, Karnataka,
Cell No. 9448242402, Email: sddixit@outlook.com

# ನವಗ್ರಹ ಆರಾಧನೆ

ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆ

ಅಕ್ಷಿ – 34

ಸಂಪಾದನೆ

**ಶ್ರೀದತ್ತ ದಿಕ್ಷಿತ ಓಣಿಕೈ, ಬೆಂಗಳೂರು**



ಪ್ರಕಾಶಕರು



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,

ಕರ್ನಾಟಕ, ದೂರವಾಣಿ : +91 94482 42402, sddixit@outlook.com

# ವಿಷಯಾನುಕ್ರಮಣಿಕೆ

# 1 ಪೀಠಿಕೆ

ಮಾನವರಲ್ಲಿರುವ ದೇವರ ಬಗೆಗಿನ ಕಲ್ಪನೆಗಳು ಮತ್ತು ನಂಬುಗೆಗಳು ಸಾವಿರಾರುವರ್ಷ ಪುರಾತನವಾದವು. ಈ ನಂಬುಗೆ ಜನರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿವೆ. ಹಿಂದೂಸಮಾಜದ ಜನರಲ್ಲಿ ಏಕೈಕ ದೇವರ ಕಲ್ಪನೆಯನ್ನು ಉಪನಿಷತ ಕಾಲದಲ್ಲಿ ಕಾಣಬಹುದು. ಸಾಮಾನ್ಯಜನರ ಮಾನಸಿಕ ಇತಿಮಿತಿಗಳನ್ನು ಮತ್ತು ಬಯಕೆಗಳನ್ನು ಗಮನಿಸಿದ ತತ್ವಜ್ಞಾನಿಗಳು, ನೂರಾರು ದೇವತೆಗಳ ವಿವಿಧ ಆರಾಧನಾ ಮಾರ್ಗಗಳನ್ನು ರೂಪಿಸಿಕೊಟ್ಟರು. ಪೂಜೆ-ಪುನಸ್ಕಾರ, ಜಪ-ತಪ, ಹೋಮ-ಹವನ, ದಾನ-ತರ್ಪಣೆ-ಸಂತರ್ಪಣೆ, ನೃತ್ಯ-ಗಾಯನ, ಕೀರ್ಥನೆ-ಭಜನೆ, ಪ್ರದಕ್ಷಿಣೆ-ನಮಸ್ಕಾರ, ಕ್ಷೇತ್ರದರ್ಶನ-ತೀರ್ಥಸ್ನಾನ ಹೀಗೆ ಹತ್ತು-ಹಲವು ಮಾರ್ಗಗಳು. ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣು ಎಂಬ ಐದು ದೇವತೆಗಳ **ಪಂಚಾಯತನ** ಪೂಜಾಕ್ರಮವನ್ನು **ಶ್ರೀ ಆದಿ ಶಂಕರಾಚಾರ್ಯರು** ಪ್ರಚುರ ಪಡಿಸಿದರೆಂಬುದು ಪ್ರತೀತಿ.

ದಿನನಿತ್ಯದ ಸ್ನಾನಾದಿ ಎಲ್ಲಾ ಕರ್ಮಗಳಿಗೆ ಮಂತ್ರಗಳನ್ನು ಹೇಳಬೇಕು. ಮಂತ್ರಗಳಲ್ಲಿ ನಾಲ್ಕು ವಿಧ, 1) ವೇದಮಂತ್ರ, 2) ಪೌರಾಣಿಕ ಶ್ಲೋಕ ಮಂತ್ರ, 3) ತಾಂತ್ರಿಕ ಮಂತ್ರ ಮತ್ತು 4) ನಾಮ ಮಂತ್ರ. ಪುರುಷಸೂಕ್ತದ ಸಾಲುಗಳಿಂದ ಷೋಡಶೋಪಚಾರ ಪೂಜೆ ವೇದಮಂತ್ರಕ್ಕೆ ಉದಾಹರಣೆ. ವಿಷ್ಣವೇ ನಮಃ, ಶಿವಾಯ ನಮಃ ಇವು ನಾಮ ಮಂತ್ರಗಳಿಗೆ ಉದಾಹರಣೆ. ಲಂ ಪ್ರಥಿವ್ಯೈ ನಮಃ, ಗಂ ಗಣಪತಯೇ ನಮಃ ಇವು ತಾಂತ್ರಿಕ ಮಂತ್ರಗಳು. ಪಂಚಾಮೃತ ಪೂಜಾ ಸಮಯದಲ್ಲಿ ವೇದ ಮತ್ತು ಶ್ಲೋಕ ಎರಡನ್ನೂ ಹೇಳುವ ರೂಢಿಯೂ ಇದೆ. ಯಾವ ವಿಷಯಕ್ಕೆ ಮಂತ್ರ ಬೇಕಾಗಿರುವುದೋ ಆ ಶಬ್ಧವನ್ನೊಳಗೊಂಡಿರುವ ಪೂರ್ಣವಾಕ್ಯವನ್ನು ಮಂತ್ರವನ್ನಾಗಿ ಉಪಯೋಗಿಸಬಹುದು. ಅದೂ ಸಿಗದಿದ್ದಲ್ಲಿ ವೇದಮಾತಾ ಗಾಯತ್ರಿ ಉಪಯೋಗಿಸಬಹುದು. ಈ ಸಂಕಲನದಲ್ಲಿ ನವಗ್ರಹ ಆರಾಧನಾ ಶ್ಲೋಕ, ಮಂತ್ರಗಳನ್ನು ಸಂಗ್ರಹಿಸಲಾಗಿದೆ. ಈ ಮಂತ್ರಗಳ ಪಠಣದಿಂದ ನಿಮಗೆ ಶಾಂತಿ, ಸಮಾಧಾನ ದೊರೆತು ಇಚ್ಛಾ ಪೂರೈಕೆ ಆದರೆ ನಮ್ಮ ಶ್ರಮ ಸಾರ್ಥಕ.

# 2 ನವಗ್ರಹಗಳ ಸೂಕ್ಷ್ಮ ಪರಿಚಯ

ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು. ಇವು ನವ (9) ಗ್ರಹಗಳು.

ನಮಃ ಸೂರ್ಯಾಯ ಚಂದ್ರಾಯ ಮಂಗಳಾಯ ಬುಧಾಯ ಚ । ಗುರು ಶುಕ್ರ ಶನಿಭ್ಯಶ್ಚ ರಾಹವೇ ಕೇತವೇ ನಮಃ ॥1॥ ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರೀ ಭಾನುಃ ಶಶೀ ಭೂಮಿಸುತೋ ಬುಧಶ್ಚ । ಗುರುಶ್ಚ ಶುಕ್ರಃ ಶನಿರಾಹುಕೇತವಃ ಕುರ್ವಂತು ಸರ್ವೇ ಮಮ ಸುಪ್ರಭಾತಂ ॥2॥ ಸೂರ್ಯಃ ಸೋಮೋ ಮಹೀಪುತ್ರಃ ಸೋಮಪುತ್ರೋ ಬೃಹಸ್ಪತೀ । ಶುಕ್ರಃ ಶನೈಶ್ಚರೋ ರಾಹುಃ ಕೇತುಶ್ಚೇತಿ ಗ್ರಹಾಃ ಸ್ಮೃತಾಃ ॥3॥ ಆಧಾರೇ ಪ್ರಥಮೇ ಸಹಸ್ರಕಿರಣಂ ತಾರಾಧವಂ ಸ್ವಾಶ್ರಯೇ ಮಾಹೇಯಂ ಮಣಿಪೂರಕೇ ಹೃದಿ ಬುಧಂ ಕಂಠೇ ಚ ವಾಚಸ್ಪತಿಂ । ಭ್ರೂಮಧ್ಯೇ ಭೃಗುನಂದನಂ ದಿನಮಣೇಃ ಪುತ್ರಂ ತ್ರಿಕೂಟಸ್ಥಲೇ ನಾಡೀಮರ್ಮಸು ರಾಹು-ಕೇತು-ಗುಲಿಕಾನ್ನಿತ್ಯಂ ನಮಾಮ್ಯಾಯುಷೇ ॥4॥ ಆರೋಗ್ಯಂ ಪ್ರದದಾತು ನೋ ದಿನಕರಃ ಚಂದ್ರೋಯಶೋ ನಿರ್ಮಲಂ ಭೂತಿಂ ಭೂಮಿಸುತೋ ಸುಧಾಂಶುತನಯಃ ಪ್ರಜ್ಞಾಂ ಗುರುರ್ಗೌರವಂ । ಕಾವ್ಯಃ ಕೋಮಲವಾಗ್ವಿಲಾಸಮತುಲಂ ಮಂದೋ ಮುದಂ ಸರ್ವದಾ ರಾಹುರ್ಬಾಹುಬಲಂ ವಿರೋಧಶಮನಂ ಕೇತುಃ ಕುಲಸ್ಯೋನ್ನತಿಂ ॥5॥ ಓಂ ಸೂರ್ಯಃ ಶೌರ್ಯಮಥೇಂದುರುಚ್ಚಪದವೀಂ, ಸನ್ಮಂಗಲಂ ಮಂಗಲಃ । ಸದ್ಬುದ್ಧಿಂ ಚ ಬುಧೋ ಗುರುಶ್ಚ ಗುರುತಾಂ, ಶುಕ್ರಃ ಸುಖಂ ಶಂ ಶನಿಃ । ರಾಹುರ್ಬಾಹುಬಲಂ ಕರೋತು ವಿಪುಲಂ, ಕೇತುಃ ಕುಲಸ್ಯೋನ್ನತಿಂ । ನಿತ್ಯಂ ಪ್ರೀತಿಕರಾ ಭವಂತು ಭವತಾಂ, ಸರ್ವೇ ಪ್ರಸನ್ನಾ ಗ್ರಹಾಃ ॥ ಓಂ ಆದಿತ್ಯಾದಿ ನವಗ್ರಹ ದೇವತಾಭ್ಯೋ ನಮೋ ನಮಃ ॥

ಇದು ರುಢಿಯಲ್ಲಿರುವ ನವಗ್ರಹಗಳ ಕ್ರಮ ಆದರೆ ವೇದದಲ್ಲಿರುವ ಕ್ರಮವು ಆದಿತ್ಯ, ಅಂಗಾರಕ, ಶುಕ್ರ, ಚಂದ್ರ, ಬುಧ, ಬೃಹಸ್ಪತಿ, ಶನೈಶ್ಚರ, ರಾಹು, ಕೇತು ಎಂಬುದಾಗಿದೆ.

ಸನಾತನ ಧರ್ಮಾವಲಂಬಿಗಳಾದ ಭಾರತೀಯರಲ್ಲಿ ನವಗ್ರಹಗಳ ಆರಾಧನೆ ಅತ್ಯಂತ ಪ್ರಾಚೀನಕಾಲದಿಂದ ನಡೆದುಬಂದಿದೆ. ಪ್ರತಿಯೊಂದು ವೈದಿಕ ಕರ್ಮದಲ್ಲಿ ಗ್ರಹಪೂಜೆಯು ಅವಿಭಾಜ್ಯ ಅಂಗವಾಗಿರುತ್ತದೆ. ಈ ಗ್ರಹಗಳು ಸಮಸ್ತ ಜೀವಜಾಲದ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆಯೆಂದು ಆಸ್ತಿಕನಾದ ಪ್ರತಿಯೊಬ್ಬ ಭಾರತೀಯನ ವಿಶ್ವಾಸ. ಪಂಚಾಯತನ ನಿತ್ಯ ಪೂಜೆಯಲ್ಲಿ ಜಗದ್ಗುರು ಶಂಕರಾಚಾರ್ಯರು ಸೂರ್ಯನನ್ನು ಎಲ್ಲಗ್ರಹಗಳ ಪ್ರತಿಕವಾಗಿ ಅಳವಡಿಸಿ ಕೊಟ್ಟಿದಾರೆ.

ಈ ನವಗ್ರಹಗಳ ಅಧ್ಯಯನವೇ ವೈದಿಕ ಜ್ಯೋತಿಷ್ಯ ಶಾಸ್ತ್ರ. ವಿವಿಧ ಗತಿಗಳಿಂದ ಆಕಾಶದಲ್ಲಿ ಸಂಚಾರಮಾಡುವ ಈ ಗ್ರಹಗಳು ಎಲ್ಲವನ್ನೂ ನಿಯಂತ್ರಿಸುತ್ತವೆಯೆಂಬುದು ಜ್ಯೋತಿಷ್ಯದ ಮೂಲಭೂತ ಸಿದ್ಧಾಂತ. ಇವು ದೃಶ್ಯವಾಗಿ ಕಣ್ಣಿಗೆ ಕಾಣುವ ಅಕಾಶ ಕಾಯಗಳೂ ಹೌದು, ಖಗೋಳ ಗಣಿತದ ಸಾಂಕೇತಿಕ ಬಿಂದುಗಳು ಹೌದು, ಸಕಲ ಜೀವಜಾಲವನ್ನು ಸ್ವಕರ್ಮಾನುಸಾರ ಪ್ರೇರೇಪಿಸುವ ಅಗೋಚರ ದೈವೀ ಶಕ್ತಿಗಳೂ ಸಹ ಹೌದು, ಜೀವರು ಮಾಡುವ ಸಕಲ ಶುಭಾಶುಭ ಕರ್ಮಗಳಿಗೆ ಸಾಕ್ಷಿಯಾಗಿ ಫಲಸ್ವರೂಪ ಸುಖದುಃಖಾದಿಗಳನ್ನುಂಟುಮಾಡುವ ದೇವತಾ ಸ್ವರೂಪರಾದ ಲೋಕಪಾಲಕರೂ ಹೌದು. ವಿಶ್ವದ ಸೃಷ್ಟಿ-ಸ್ಥಿತಿ-ಲಯಕರ್ತೃನಾಗಿರುವ ಎಲ್ಲವನ್ನೂ ನಿಯಮನ ಮಾಡುವ ಪರಮಪುರುಷ ಪರಬ್ರಹ್ಮನಾದ ಶ್ರೀಮನ್ನಾರಾಯಣನೇ ಕಾಲನಿಯಾಮಕನಾಗಿ ಕಾಲಪುರುಷ ಎಂದು ಎಲ್ಲ ಶಾಸ್ತ್ರಗಳಲ್ಲಿ ಸ್ತುತಿಸಲ್ಪಟ್ಟಿದ್ದಾನೆ. ಈ ಕಾಲಪುರುಷನ ವಿಶ್ವರೂಪೀ ಶರೀರದ ಅಂಗವಿಭಾಗದಂತಿರುವ ಮೇಷಾದಿ ದ್ವಾದಶ ರಾಶಿಗಳಲ್ಲಿ ಸಂಚರಿಸುತ್ತಾ ಅನೇಕಾನೇಕ ಯೋಗಗಳನ್ನು ಸೃಷ್ಟಿಸುತ್ತಾ ವಿಶ್ವದ ಸಮಸ್ತ ಘಟನಾಚಕ್ರದ ಸೂತ್ರಧಾರರಂತೆ ನವಗ್ರಹಗಳು ಆ ಪರಮಾತ್ಮನನ್ನು ನಿರಂತರ ಸೇವಿಸುತ್ತಿರುತ್ತಾರೆ. ಆಕಾಶದಲ್ಲಿ ಗ್ರಹಗೋಲಕಗಳಂತೆ ಕಾಣುವ ಈ ನವಗ್ರಹರು ಎಲ್ಲ ಜೀವಜಾಲಗಳಲ್ಲಿ

ತತ್ವರೂಪಗಳಿಂದ ಒಳಗೂ ಹೊರಗೂ ಇದ್ದು ತಮ್ಮ ಪ್ರಭಾವವನ್ನು ಆಯಾ ಜೀವಿಯ ಕರ್ಮಾನುಸಾರ ಬಿತ್ತರಿಸುತ್ತ ತಮ್ಮ ಕರ್ತವ್ಯವನ್ನು ಮಾಡುತ್ತಾರೆ.

ಜೀವರ ಕರ್ಮಫಲವನ್ನು ಅವರವರ ಯೋಗ್ಯತೆ ಸಾಧನೆಗಳಿಗನುಗುಣವಾಗಿ ತಂದು ಕೊಡುವುದೇ ನವಗ್ರಹಗಳ ಕೆಲಸ. ಅವರಿಗೆ ಯಾರ ಮೇಲೆ ಪ್ರೀತಿಯೂ ಇಲ್ಲ ದ್ವೇಷವೂ ಇಲ್ಲ. ಜ್ಯೋತಿಷ್ಯದಲ್ಲಿ ಹೇಳಲಾಗುವಂತೆ ಗ್ರಹಪೀಡೆ, ಗ್ರಹಬಾಧೆ, ಕಾಟ, ದೋಷ ಇತ್ಯಾದಿಗಳು ನಮ್ಮ ಕರ್ಮಫಲಗಳ ಪ್ರತಿಫಲನಗಳು. ಇವುಗಳನ್ನು ಸೂಚಿಸುವ ಕಾರ್ಯ ಮಾತ್ರ ನವಗ್ರಹಗಳದು. ಕಾರಕತ್ವಗಳು ನವಗ್ರಹಗಳ ಅಭಿವ್ಯಕ್ತಿ ಮಾತ್ರ ಮೂಲ ಸ್ವರೂಪವಲ್ಲ. ನವಗ್ರಹರು ಸ್ವರೂಪತಃ ಭಗವಂತನ ಭಕ್ತರೂ ಅನುಯಾಯಿಗಳೂ ಅದ ಶ್ರೇಷ್ಠ ದೇವತೆಗಳು. ಭಗವಂತನ ವಿಶ್ವವ್ಯಾಪಾರವೆಂಬ ಲೀಲೆಯಲ್ಲಿ ಅವನ ಪ್ರೀತಿಗಾಗಿ ಅನೇಕ ಸೇವೆಗಳನ್ನು ಮಾಡುತ್ತಿರುವ ದೇವತೆಗಳಂತೆ ನವಗ್ರಹಗಳು ತಾವೂ ಸಹ ಜೀವಿಗಳಿಗೆ ಶುಭಾಶುಭ ಫಲಾಫಲಗಳನ್ನುಂಟು ಮಾಡಿ ತಮ್ಮ ಸೇವೆಯನ್ನು ಮಾಡುತ್ತಿರುತ್ತಾರೆ. ಆದ್ದರಿಂದಲೇ ಜ್ಯೋತಿಷ್ಯವು ಎಲ್ಲರೂ ನವಗ್ರಹಗಳಿಗೆ ಅಧೀನವೆಂದು ಹೇಳುತ್ತದೆ.

ಗ್ರಹಾಧೀನಂ ಜಗತ್ಸರ್ವಂ ಗ್ರಹಾಧೀನಾ ನರಾವರಾಃ । ಸೃಷ್ಟಿಸಂರಕ್ಷಣಸಂಹಾರಾಃ ಸರ್ವೇ ಚಾಪಿ ಗ್ರಹಾನುಗಾಃ ॥

ಸಮಸ್ತ ಜಗತ್ತು ಗ್ರಹಗಳ ಅಧೀನವಾಗಿದೆ, ಮನುಷ್ಯರು ಮತ್ತು ಇತರ ಜೀವಗಳು ಗ್ರಹಗಳ ಅಧೀನರೇ ಆಗಿರುತ್ತಾರೆ. ಸೃಷ್ಟಿ-ಪಾಲನೆ-ಸಂಹಾರ ಎಲ್ಲವೂ ಗ್ರಹಗಳ ಅನುಗಾಮಿಯೇ (ಗ್ರಹಸೂಚಿತವೇ) ಆಗಿವೆ.

ಆಯುಶ್ಚ ವಿದ್ಯಾಂ ಚ ತಥಾ ಸುಖಂ ಚ ಧರ್ಮಾರ್ಥಕಾಮಾನ್ ಬಹುಪುತ್ರತಾಂ ಚ । ಶತ್ರುಕ್ಷಯಂ ರಾಜಸು ಪೂಜ್ಯತಾಂ ಚ ತುಷ್ಟಾ ಗ್ರಹಾಃ ಸರ್ವಮೇತದ್ ದಿಶಂತಿ ॥

ಪ್ರಸನ್ನರಾದ ನವಗ್ರಹರು ಆಯುಷ್ಯ, ವಿದ್ಯೆ ಮತ್ತು ಸುಖವನ್ನು ಕೊಡುತ್ತಾರೆ. ಧರ್ಮ-ಅರ್ಥ-ಕಾಮ (ತ್ರಿವರ್ಗ), ಬಹುಸಂತತಿಯನ್ನು ಕೊಡುತ್ತಾರೆ. ಶತ್ರುಗಳನ್ನು

ನಾಶಮಾಡುತ್ತಾರೆ. ಅನೇಕ ರಾಜರಿಂದ ಪೂಜ್ಯತ್ವವನ್ನು (ಮರ್ಯಾದೆ) ಸಹ ಪ್ರದಾನ ಮಾಡುತ್ತಾರೆ.

ಈ ಗ್ರಹಗಳು ಸಕಲ ಪ್ರಾಣಿ ಜಾತರ ಜೀವನದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದು ತಮ್ಮ ಪ್ರಭಾವವನ್ನು ಬೀರುತ್ತವೆ. ಪರಮೋತ್ಕರ್ಷವನ್ನು ಹೊಂದಿ ಗದ್ದುಗೆಯನ್ನು ಏರುವುದಕ್ಕೂ, ನೆಲಕಚ್ಚಿ ಪ್ರಪಾತಕ್ಕೆ ಬೀಳುವುದಕ್ಕೂ ಗ್ರಹದ ಸ್ಥಿತಿಗತಿಗಳು ಕಾರಣವಾಗುತ್ತವೆ. ಕಾರಿಕೆಯೊಂದು ಹೀಗೆ ಹೇಳುತ್ತದೆ.

ಗ್ರಹಾ ಗಾವೋ ನರೇಂದ್ರಶ್ಚ ಬ್ರಾಹ್ಮಣಶ್ಚ ವಿಶೇಷತಃ । ಪೂಜಿತಾಃಪೂಜಯಿಷ್ಯಂತಿ ನಿರ್ದಹಂತ್ಯನಮಾನಿತಾ ॥

ಗ್ರಹಗಳು ಗೋವುಗಳು ರಾಜ ಮತ್ತು ಬ್ರಾಹ್ಮಣರು ಈ ನಾಲ್ವರು ಪೂಜಿತರಾದರೆ ಸದಭೀಷ್ಟ ಪ್ರದರು, ಅವಮಾನಿತವಾದರೆ ಸರ್ವನಾಶಕರು ಎಂದೂ ಜ್ಯೋತಿಷ್ಯ ಶಾಸ್ತ್ರ ಒಂಬತ್ತು ಗ್ರಹಗಳನ್ನು ಹೆಸರಿಸುತ್ತದೆ.

ಗ್ರಹಗಳಿಂದ ಸೂಚಿತವಾದ ದೋಷದ ನಿವೃತ್ತಿಗಾಗಿ ಗ್ರಹಾರಾಧನೆಯನ್ನು ಶಾಸ್ತ್ರ ಹೇಳುತ್ತದೆ. "ದುಷ್ಟಾರಿಷ್ಟೇ ಸಮಾಯಾತೇ ಕರ್ತವ್ಯಂ ಗ್ರಹಶಾಂತಿಕಂ" ಎಂಬುದಾಗಿ ಮಳೆ, ಆಯುಷ್ಯ, ಆರೋಗ್ಯ, ಪುಷ್ಟಿ ಮೊದಲಾದ ಉದ್ದೇಶದಲ್ಲೂ ಗ್ರಹಗಳನ್ನು ಆರಾಧಿಸುವುದಿದೆ. ಈ ಗ್ರಹಾರಾಧನೆ ಸಾಮಾನ್ಯವಾಗಿ ಪೂಜೆ, ಹೋಮ, ಜಪ, ಸ್ತೋತ್ರ, ದಾನ ಎಂಬುದಾಗಿ ಐದು ವಿಧ.

ಈ ಗ್ರಹಗಳ ಸ್ವರೂಪವನ್ನು ಪರಿಚಯಿಸಿಕೊಳ್ಳೋಣ.



**ಸೂರ್ಯ** - "ಗ್ರಹಾಣಾಮಾದಿರಾದಿತ್ಯಃ" ಎಂಬಂತೆ ಈತ ಗ್ರಹಗಳಲ್ಲಿ ಮೊದಲಿಗೆ. ಆರೋಗ್ಯ ಜ್ಞಾನಗಳನ್ನು ದಯಪಾಲಿಸುವ ದೇವತೆ. ಎರಡೂ ಕೈಯಲ್ಲಿ ಕೆಂಪು ಕಮಲಗಳು, ಕೆಂಪು ರಥದಲ್ಲಿ ರಥಿಕ, ಅರುಣನೇ ಇವಗೆ ಸಾರಥಿ. ರಥಕ್ಕೆ ಕಟ್ಟಿರುವ ಕುದುರೆಗಳು 7. ಸೂಕ್ಷ್ಮಗುಂಗುರು ಕೂದಲುಗಳಿಂದ ಒಪ್ಪುವ ತಲೆ. ಆಕರ್ಷಕ ರೂಪ, ಚೇತೋಹಾರಿಯಾದ ಗಂಭೀರ ಧ್ವನಿ. ಹೆಚ್ಚು ಎತ್ತರವಿಲ್ಲದ ನಿಲುವು. ಅನುಪಮ ಬುದ್ಧಿ ಚಾತುರ್ಯ. ಗೋರೋಚನದಂತೆ ಕೆಂಪು ಬೆರೆತ ಸುಂದರ ಕಣ್ಣುಗಳು. ಧೈರ್ಯಶಾಲಿ ಪ್ರಚಂಡ. ಪಿತ್ತಪ್ರಕೃತಿ, ಉನ್ನತ ವ್ಯಕ್ತಿತ್ವ. ದೊಡ್ಡ ಕೈಗಳು. ಕೆಂಪು ಉಡುಗೆ, ಇದು ರವಿಯನ್ನು ಋಷಿಮುನಿಗಳು ಗುರುತಿಸುವ ಬಗೆ.

ಆದಿತ್ಯ, ಮಾರ್ತಾಂಡ, ಭಾನು, ರವಿ, ದಿವಾಕರ, ಪ್ರಭಾಕರ ಇವು ಸೂರ್ಯನ ಪ್ರಸಿದ್ಧ ಹೆಸರುಗಳು. ಅದಿತಿ-ಕಶ್ಯಪರ ಮಗ. ಅದೊಂದು ದಿನ ಕಶ್ಯಪರು ಮನೆಯಲ್ಲಿ ಇರಲಿಲ್ಲ. ಅದಿತಿದೇವಿ ತುಂಬು ಗರ್ಭಿಣಿ. ದೇವರ ಧ್ಯಾನದಲ್ಲಿದ್ದಾಳೆ. ಹೊರಗಿನಿಂದ ಭವತಿ ಭಿಕ್ಷಾಂಧೇಹಿ ಎಂಬ ಧ್ವನಿ. ಬುಧನು ಭಿಕ್ಷೆಗಾಗಿ ಬಂದಿದ್ದ. ಕರೆದ ಕೂಡಲೇ ಭಿಕ್ಷೆಗೆ ಬರಲಿಲ್ಲವೆಂಬ ಸಿಟ್ಟು ಬುಧನಿಗೆ. ಏನು ಗರ್ಭಿಣಿ ಎಂಬ ಅಹಂಕಾರವೋ? ಗರ್ಭದಲ್ಲಿರುವ ಆ ಶಿಶು ಸತ್ತು ಹೋಗಲಿ ಎಂಬ ಶಾಪವಾಗಿ ಆ ಸಿಟ್ಟು ಸ್ಫೋಟಗೊಂಡಿತು. ಆಕೆ ತತ್ತರಿಸಿ ಬಿದ್ದಳು. ಮೃತವಾದ ಅಂಡದಂತೆ ಕಾಣಿಸಿದ ಆ ಶಿಶು ಶ್ರೀಹರಿಯ ಮಹಿಮೆಯಿಂದ ಕಶ್ಯಪರ ಪ್ರಭಾವದಿಂದ ಸತ್ತು ಬದುಕಿತು. ಈ

ಮಗುವೇ ಸೂರ್ಯ. ಆದ್ದರಿಂದಲೇ ಮಾರ್ತಾಂಡ ಆದಿತ್ಯ ಎಂಬುದು ಇವನ ಇನ್ನೊಂದು ಹೆಸರು. ಅದಿತಿಯ ಮಗನೆಂಬ ಕಾರಣದಿಂದ ಮಾತ್ರ ಇವನಿಗೆ ಈ ಹೆಸರಲ್ಲ. ದಿನದಿನವೂ ಉದಯಿಸುತ್ತಾ ಅಸ್ತಮಿಸುತ್ತಾ ಜೀವಜಾತದ 24 ಘಂಟೆಗಳ ಆಯುಷ್ಯವನ್ನು ಕಿತ್ತು ಸಾಗುವುದರಿಂದ ಇವನಿಗೆ ಈ ಹೆಸರು. (ಆಯುರಾದಾಯ ಯಾತೀತಿ ಆದಿತ್ಯಃ).

ಮನುಷ್ಯ ಪ್ರತಿದಿನವೂ ಸೂರ್ಯಾಸ್ತದ ಸುಂದರ ಸಂಜೆಯನ್ನು ನೋಡಿ ಖುಶಿ ಪಡುತ್ತಾನೆ. ತನ್ನ ವಯಸ್ಸು ಒಂದು ದಿನ ಜಾಸ್ತಿಯಾಯಿತು ಎಂದೇ ಭಾವಿಸುತ್ತಾನೆ. ಆಯುಷ್ಯದಲ್ಲಿ ಒಂದುದಿನ ಕಡಿಮೆಯಾಯಿತು ಎಂದು ಯೋಚಿಸುವುದಿಲ್ಲ. ಇದು ದುರಂತ.

ಸಂಜ್ಞಾ ಮತ್ತು ಛಾಯಾ ಸೂರ್ಯನ ಹೆಂಡಂದಿರು. ಸಂಜ್ಞೆಯಲ್ಲಿ ಯಮ, ಯಮುನೆ ಮತ್ತು ಮನು ಹುಟ್ಟಿದರು. ಛಾಯಾ ದೇವಿಯಲ್ಲಿ ಸಾವರ್ಣಿ ಮತ್ತು ಶನೀಶ್ವರ ಎಂಬ ಈರ್ವರು ಹುಟ್ಟಿದರು. ಈ ಮನ್ವಂತರದ ಅಧಿಪತಿಯಾದ ವೈವಸ್ವತ ಮನು ಸೂರ್ಯನ ಪುತ್ರ. ಗ್ರಹಕೋಟಿಯಲ್ಲಿ ಭಯಂಕರನೆನಿಸಿದ ಶನಿಯೂ ರವಿಕುಮಾರ. ಕರ್ಣ ಸುಗ್ರೀವರು ಸೂರ್ಯಾಂಶ ಸಂಭೂತರು.

**ಚಂದ್ರ** ಚಂದ್ರ, ಶಶಿ, ಇಂದು, ಸೋಮ, ಶೀತಗು, ವಿಧು, ಇವು ಚಂದ್ರನ ಪ್ರಸಿದ್ಧ ಹೆಸರುಗಳು. ರಾಜಾನೌ ರವಿಶೀತಗು ಎಂಬಂತೆ ಸೂರ್ಯಚಂದ್ರರು ಗ್ರಹರಾಜರು. ಸೂರ್ಯ ಬೆಳಕು ಕೊಡುವ ದೇವನಾದರೆ, ತಾಪದಿಂದ ಬೆಂದವನಿಗೆ ತಂಪು ಕೊಡುವ ದೇವತೆ ಚಂದ್ರ. ಎರಡು ಕೈಗಳು. ಒಂದರಲ್ಲಿ ಗದೆ, ಇನ್ನೊಂದರಲ್ಲಿ ಅಭಯಮುದ್ರೆ. ಬಿಳಿಯ ಸ್ವಚ್ಛವಾದ ಬಟ್ಟೆಯನ್ನು ಧರಿಸಿದ ಸುಂದರವಾದ ಹತ್ತು ಕುದುರೆಗಳ ಬಿಳಿಯ ರಥದಲ್ಲಿ ಅಸೀನ.



ಸೌಮ್ಯ ಸ್ವಭಾವ, ಸುಂದರವಾದ ಕಣ್ಣುಗಳು, ಮಧುರ ಮಾತು, ಬಿಳಿಬಣ್ಣ, ಬೊಜ್ಜು ಇಲ್ಲದ ಶರೀರ, ಮಧ್ಯವಯಸ್ಕ, ಎತ್ತರದ ನಿಲುವು. ಕಪ್ಪು ಗುಂಗುರು ಕೂದಲು, ಬುದ್ಧಿವಂತಿಕೆ, ಸಾತ್ವಿಕತೆ, ಬಹುಜನ ಮೈತ್ರಿ, ದಯಾಳುತ್ವ, ವೃದ್ಧಸ್ತ್ರೀ ಸಂಪರ್ಕ, ಚಾಂಚಲ್ಯ ಸೌಭಾಗ್ಯ, ಬಿಳಿಯ ಉಡುಗೆ ಇವು ಚಂದ್ರನ ಲಕ್ಷಣಗಳು.

ಚಂದ್ರ ಸಮುದ್ರ ಮಥನದ ಕಾಲದಲ್ಲಿ ಕ್ಷೀರೋದಾರ್ಣವ ಸಂಭೂತನೂ ಹೌದು. ಅತ್ರಿನೇತ್ರ ಸಮುದ್ಭವನೂ ಹೌದು. ಸ್ವಾಯಂಭುವ ಮನ್ವಂತರದಲ್ಲಿ ಅತ್ರಿಋಷಿಯ ಕಣ್ಣಿನಿಂದ ಜನಿಸಿದ. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಧರ್ಮಪ್ರಜಾಪತಿಗೆ ವಸುಘ್ನಿಯಲ್ಲಿ ಹುಟ್ಟಿದ.

ದಕ್ಷಪ್ರಜಾಪತಿಯು ತನ್ನ ಅರವತ್ತು ಹೆಣ್ಣುಮಕ್ಕಳಲ್ಲಿ ಇಪ್ಪತ್ತೇಳು ಮಕ್ಕಳನ್ನು ಚಂದ್ರನಿಗೆ ಕೊಟ್ಟನು. ಈ ಚಂದ್ರಪತ್ನಿಯರೇ ಇಪ್ಪತ್ತೇಳು ನಕ್ಷತ್ರಗಳು. ಚಂದ್ರನು ರೋಹಿಣೀ ಎಂಬವಳಲ್ಲಿ ಮಾತ್ರ ಅತಿಶಯವಾಗಿ ಅನುರಕ್ತನಾದಾಗ ಉಳಿದವರು ಅಪ್ಪನಲ್ಲಿ ದೂರಿದರು. ಅಪ್ಪ ಅಳಿಯನಿಗೆ ಕ್ಷಯರೋಗ ಬರುವಂತೆ ಶಪಿಸಿದ.

ಚಂದ್ರ ವಿದ್ಯಾಭ್ಯಾಸಕ್ಕಾಗಿ ದೇವಗುರುವಾದ ಬೃಹಸ್ಪತಿಯಲ್ಲಿ ಹೋಗಿದ್ದ. ಸುಂದರಾಂಗನಾದ ಇವನನ್ನು ಗುರುಪತ್ನಿ ತಾರೆ ಮೋಹಿಸಿದಳು. ಆಕೆಯನ್ನು ಚಂದ್ರ ಬಲಾತ್ಕಾರದಿಂದ ಸಂಭೋಗಿಸಿ ಬುಧನನ್ನು ಪಡೆದ.

ಮತ್ತೊಮ್ಮೆ ಸಮುದ್ರಮಥನ ಕಾಲದಲ್ಲಿ ಸಾಗರದಿಂದ ಆವಿರ್ಭವಿಸಿದ ಚಂದ್ರನನ್ನು ಶಿವ ತಲೆಯಲ್ಲಿ ಧರಿಸಿ ಚಂದ್ರಶೇಖರನೆನಿಸಿದ.

ಅಮೃತಪಾನದ ಸಂದರ್ಭದಲ್ಲಿ ಈತ ಸೂರ್ಯನೊಂದಿಗೆ ಸೇರಿಕೊಂಡು ಮಾಯಾವಿಯಾದ ರಾಹುವನ್ನು ವಿಷ್ಣುವಿಗೆ ಸೂಚಿಸಿದ. ವಿಷ್ಣು ಚಕ್ರಾಯುಧದಿಂದ ರಾಹುವಿನ ಶಿರವನ್ನು ಭೇದಿಸಿದರೂ ಅಮೃತದ ಪ್ರಭಾವದಿಂದ ರುಂಡವು ರಾಹು ಗ್ರಹವೆನಿಸಿ ಚಂದ್ರಸೂರ್ಯರನ್ನು ದ್ವೇಶಿಸತೊಡಗಿತು.

**ಮಂಗಳ -** ಮಂಗಳ ಅಂಗಾರಕ, ಕುಜ, ಭೌಮ ಎಂಬವು ಇವನ ಪ್ರಸಿದ್ಧ ಹೆಸರುಗಳು. ಕೆಂಪುಮಾಲೆಯನ್ನು ಧರಿಸಿರುವ ಕೆಂಪು ಬಟ್ಟೆಯ ಚತುರ್ಭುಜ ಈತ. ಗದಾ ಶಕ್ತಿ ಖಡ್ಗ ಶೂಲಗಳನ್ನು ಚತುರ್ಭುಜಗಳಲ್ಲಿ ಧರಿಸಿದ್ದಾನೆ.

ಕುಳ್ಳಶರೀರ, ಪಿಂಗಳ ಕಣ್ಣುಗಳು ಮಸ್ತಾದ ಮೈಕಟ್ಟು, ಕಾಂತಿಯುಕ್ತ ಮುಖ, ಚಂಚಲ ಸ್ವಭಾವ, ಚುರುಕುತನ, ಶೌರ್ಯ, ಪ್ರತಿಭಾಪೂರ್ಣ ಮಾತುಗಳು, ಗುಂಗುರು ಗುಂಗುರಾದ ಕೆಂಪು ಕೂದಲು, ತಾಮಸ ಸ್ವಭಾವ, ಸಾಹಸ ಪ್ರಿಯತೆ, ಹಿಂಸಾ ತತ್ಪರತೆ, ಕೆಂಪಾದ ಮೈಬಣ್ಣ, ಕೆಂಪು ಉಡುಗೆಗಳು ಇದು ಕುಜನ ಸ್ವರೂಪದ ಚಿತ್ರ.



ವಿಷ್ಣುವಿನ ಅನುಗ್ರಹದಿಂದ ಭೂದೇವಿಯಲ್ಲಿ ಹುಟ್ಟಿದ ಭೂಮಿಯ ಮಗನಾದ್ದರಿಂದಲೇ ಈತ ಭೌಮ. ಆದ್ದರಿಂದಲೇ ಕುಜ. ತಪಸ್ಸಿನಿಂದ ನವಗ್ರಹಗಳಲ್ಲಿ ಒಬ್ಬನಾದ ದಾಕ್ಷಾಯಿಣೀ ವಿರಹ ಪೀಡಿತನಾದ. ಶಿವನ ಮುಖದ ಬೆವರು ಭೂಮಿಯಲ್ಲಿ ಬಿದ್ದಾಗ ಅದರಿಂದ ಹುಟ್ಟಿದವನು ಕುಜನೆನ್ನುತ್ತದೆ

ಬ್ರಹ್ಮವೈವರ್ತ ಪುರಾಣ.

ಈತ ಅಮಂಗಲ ಫಲಗಳನ್ನು ಸೂಚಿಸುವುದೇ ಹೆಚ್ಚು. ಆದರೂ ಇವನ ಹೆಸರು ಮಂಗಳ. ಇವನ ವಾರ ಮಂಗಳವಾರ. ಈ ದಿನ ಎಲ್ಲಾ ಶುಭಕೆಲಸಗಳಿಗೂ ಅಯೋಗ್ಯವಾಗಿ ಅಮಂಗಲವಾರವೆನಿಸಿದೆ. ಹೆಚ್ಚೇಕೆ ಕ್ಷೌರಕ್ಕೂ ನಿಷಿದ್ಧವಾದ ದಿನವೆನಿಸಿದೆ. ಹೀಗಿದ್ದರೂ ಈ ಕುಜನಿಗೆ ಮಂಗಳನೆಂಬ ಹೆಸರೇಕೆ? ಕ್ಷೀರಸಾಗರ ಭಟ್ಟರ ಮನೆಯಲ್ಲಿ ಕಾಸಿನ ಮಜ್ಜಿಗೆ ಇಲ್ಲವೆಂಬ ಗಾದೆಯ ಮಾತಿನಂತಾಯಿತಲ್ಲ ? ನಿಜ, ಮಂಗಳನೆಂದು ಹೇಳಿಯಾದರೂ ಆತ ಮಂಗಲಕರನಾಗಲಿ ಎನ್ನುವ ಪ್ರಾಚೀನ ಭಾವನೆಯೇ ಇದಕ್ಕೆ ಕಾರಣ. ಅರವತ್ತನೆಯ ಸಂವತ್ಸರ ಕ್ಷಯ. ಆದರೆ ಹಾಗೆನ್ನುತ್ತೇವೆಯೇ? ಅಕ್ಷಯನಾಮ ಸಂವತ್ಸರೇ ಎನ್ನುತೇವೆ. ಮನುಷ್ಯನಿಗೆ ಕೆಟ್ಟ ಶಬ್ದ ಹೇಳಲೂ ಹೆದರಿಕೆ !

ಈ ಗ್ರಹವನ್ನು ಸ್ತುತಿಸುವ ಸ್ತೋತ್ರ ಹೀಗಿದೆ. ಈ ಶ್ಲೋಕವನ್ನು ಪಠಿಸುವುದರ ಮೂಲಕ ಗ್ರಹದೋಷವನ್ನು ಪರಿಹರಿಸಿಕೊಳ್ಳಬಹುದು.



**ಬುಧ** - ಚಂದ್ರ (ಸೋಮ)ನ ಮಗನಾದ್ದರಿಂದ ಸೌಮ್ಯನೆಂದು ಪ್ರಸಿದ್ಧನಾಗಿದ್ದಾನೆ. ಹಸಿರು ಬಟ್ಟೆಯನ್ನುಟ್ಟ ಚತುರ್ಭುಜನು, ಖಡ್ಗ ಗುರಾಣಿ ಗದೆಗಳನ್ನು ವರಮುದ್ರೆಯನ್ನೂ ಧರಿಸಿರುವ ಸಿಂಹವಾಹನ.

ಕೆಂಪಾದ ವಿಶಾಲ ಕಣ್ಣುಗಳು, ಸ್ವಚ್ಛವಾದ ಒಳ್ಳೆಯ ಮಾತುಗಳು, ಗರಿಕೆಯ ದಲದಂತೆ ಹಸಿರು ಮೈಬಣ್ಣ, ರಾಜಸ ಸ್ವಭಾವ, ಸದಾ ಸಂತೋಷ,

ಮಧ್ಯಮರೂಪ, ನಿಪುಣ, ಉಡುಗೆ ನಡಿಗೆಗಳಿಂದ ಎಲ್ಲರನ್ನೂ ಅನುಕರಿಸುವ ಸ್ವಭಾವ, ಪಾಲಾಶದಂತೆ ಹಸಿರು ಬಣ್ಣದ ಉಡುಗೆಗಳು. ಇವು ಬುಧನಲ್ಲಿ ಕಾಣುವ ಲಕ್ಷಣಗಳು.

ದೇವಗುರು ಬೃಹಸ್ಪತಿಯ ಭಾರ್ಯೆ ತಾರೆ. ಮುಗ್ಧ ಸ್ವಭಾವದ ಅಬಲೆ, ಸುಂದರಾಂಗನಾದ ಚಂದ್ರ ಆಕೆಯನ್ನು ಬಲಾತ್ಕಾರದಿಂದ ಅಪಹರಿಸಿ ಪರಿಗ್ರಹಿಸಿದ. ಬ್ರಹ್ಮನ ಆದೇಶದ ಮೇರೆಗೆ ಚಂದ್ರ ತಾರೆಯನ್ನು ಬಿಟ್ಟುಕೊಟ್ಟ. ಗರ್ಭಿಣಿಯಾಗಿದ್ದ ಆಕೆಗೆ ಬೃಹಸ್ಪತಿ ಹೇಳಿದ "ಬೇರೆಯವರಿಂದ ಧರಿಸಿದ ಗರ್ಭವನ್ನು ತ್ಯಜಿಸು, ಇಲ್ಲವಾದರೆ ಸುಟ್ಟುಬಿಡುತ್ತೇನೆ." ತಾರೆ ನಾಚಿಕೆಯಿಂದ ಗರ್ಭವನ್ನು ತ್ಯಜಿಸಿದಳು. ಬಂಗಾರದ ಬಣ್ಣದ ಸುಂದರ ಮಗು ಜನಿಸಿತು. ಒಡನೆಯೇ ಬೃಹಸ್ಪತಿಯ ಮನಸ್ಸು ಬದಲಾಯಿತು. ಇದು ನನ್ನ ಮಗು ಎಂದ ಬೃಹಸ್ಪತಿ. "ಅಲ್ಲ ನನ್ನದು ಎಂದ ಚಂದ್ರ.

ವಿವಾದ ಮುಗಿಲು ಮುಟ್ಟಿತ್ತು. ಋಷಿಮುನಿಗಳು ತಾರೆಯಲ್ಲಿ ಕೇಳಿದರು. "ಸತ್ಯಹೇಳು" ಎಂದು. ನಾಚಿಕೆಯಿಂದ ತಲೆತಗ್ಗಿಸಿದ ಆಕೆ ಬಾಯಿ ಬಿಡಲಿಲ್ಲ. ಆಗ ತಾನೇ ಹುಟ್ಟಿದ ಮಗು ಆರ್ಭಟಿಸಿತು. "ಛೀ ದುರಾಚಾರೇ! ತೆರೆಯ ಹಿಂದೆ ಮಾಡಿದ ಆತ್ಮಘಾತುಕತನವನ್ನು ಮರೆಮಾಚುವೆಯೇಕೆ? ನಾಚಿಕೆಯಾಗುವುದಿಲ್ಲವೇ! ಬಿಚ್ಚುಬಾಯಿ." ಈತ ಚಂದ್ರನ ಮಗನೆಂದು ಸಾಬೀತಾಯಿತು. ಈ ಮಗುವನ್ನು ಚಂದ್ರನಿಗೆ ಒಪ್ಪಿಸಲಾಯಿತು. ಹುಟ್ಟಿನಿಂದಲೇ ಅಸಾಧಾರಣ ಬೌದ್ಧಿಕತೆಯನ್ನು ತೋರಿದ ಈ ಅಸಾಧಾರಣ ಜ್ಞಾನಿಗೆ "ಬುಧ" ನೆಂದು ಚತುರ್ಮುಖನೇ ಇಟ್ಟ ಹೆಸರು.

ಈ ಬುಧನಿಗೆ ಇಳೆಯೆಂಬವಳಲ್ಲಿ ಪುರೂರವನೆಂಬ ಮಗ ಜನಿಸಿದ.



**ಗುರು** - ದೇವತೆಗಳಿಗೆ ಗುರುವಾದ್ದರಿಂದ ಬೃಹಸ್ಪತಿಗೆ ಗುರುವೆಂದು ಹೆಸರು. ಉಳಿದ ಗ್ರಹಗಳಿಗಿಂತ ದೊಡ್ಡ ಗಾತ್ರದ ಗ್ರಹವಾದ್ದರಿಂದಲೂ ಗುರು. ಹಳದಿ ಬಟ್ಟೆಯನ್ನುಟ್ಟ ಈ ಬಂಗಾರದ ಬಣ್ಣದ ಚತುರ್ಭುಜ, ಕೈಗಳಲ್ಲಿ ದಂಡ, ವರಮುದ್ರೆ, ಜಪಮಾಲೆ, ಕಮಂಡಲುಗಳನ್ನು ಧರಿಸಿದ್ದಾನೆ. ಪಿಂಗಲ ಬಣ್ಣದ ಕಣ್ಣುಗಳು, ವೇದವಿದ್ಯಾಪ್ರವೀಣ, ಗಂಭೀರ ಹಾಗೂ ಸ್ಪಷ್ಟವಾದ ಸ್ವರ, ಪುಟಕ್ಕಿಟ್ಟ ಬಂಗಾರದಂತೆ ಹೊಳೆಯುವ ಮೈಬಣ್ಣ, ಉಬ್ಬಿದ ವಿಶಾಲವದ ಎದೆ, ಗಿಡ್ಡ ಶರೀರ, ಧಾರ್ಮಿಕ, ವಿನಯಶೀಲ, ನಿಪುಣ, ಸ್ಥಿರವಾಗಿ ನೆಟ್ಟ ದೃಷ್ಟಿಯುಳ್ಳವ, ಸಾಹಸಶೀಲ, ಪೀತವಸ್ತ್ರಧಾರಿ- ಇವು ಗುರುವಿನ ಸ್ವರೂಪ.

ಆಂಗೀರಸ ಮಹರ್ಷಿಯ ಮಗ. ಪತ್ನಿಯಾದ ತಾರೆಯಲ್ಲಿ ಇವನಿಗೆ ಸ್ವಿಷ್ಣಕೃತ್, ವಡವಾಗ್ನಿ ಮೊದಲಾದ ಆರುಜನ ಮಕ್ಕಳು. ಏಳನೆಯವಳು ಮಗಳು ಸ್ವಾಹಾ. ಕಚನೂ ಇವನ ಮಗ.

ಅಸುರರನ್ನು ಸೋಲಿಸಿ ದೇವತೆಗಳನ್ನು ರಕ್ಷಿಸುವುದರಲ್ಲಿ ಈತನದೇ ದೊಡ್ಡಪಾತ್ರ. ಶುಕ್ರಾಚಾರ್ಯರು ಧೂಮವ್ರತವೆಂಬ ತಪಸ್ಸಿನಲ್ಲಿದ್ದಾಗ ತಾನು ಶುಕ್ರನ ವೇಷದಿಂದ ರಾಕ್ಷಸರಾಜನಲ್ಲಿಗೆ ಹೋಗಿ ನಾಸ್ತಿಕ್ಯವನ್ನು ಬೋಧಿಸಿದ. ಇದರ ಫಲವಾಗಿ ರಾಕ್ಷಸಕುಲ ತಪಸ್ಸು ಮುಗಿಸಿದ ಶುಕ್ರನಿಂದ ಶಾಪಗ್ರಸ್ತವಾಯಿತು.

ದೈತ್ಯ ನಾಶಕ್ಕಾಗಿ ಸರಸ್ವತೀ ತೀರದಲ್ಲಿ ಬೃಹಸ್ಪತ್ಯಾಚಾರ್ಯರು ಮಹಾಯಾಗವೊಂದನ್ನು ಆಚರಿಸಿದ ಬಗ್ಗೆ ಮಹಾಭಾರತದಲ್ಲಿ ಉಲ್ಲೇಖವಿದೆ. ದೇವಗುರುವಾದ ಈತ ಸ್ವಾಭಿಮಾನಿ. ಅವಮಾನ ಅಗೌರವಗಳನ್ನು ಸಹಿಸಲಾರ. ಅದೊಂದು ದಿನ ದೇವಸಭೆಗೆ ಗುರುಗಳು ಆಗಮಿಸಿದಾಗ ದೇವೇಂದ್ರ ಎದ್ದು ನಿಲ್ಲಲಿಲ್ಲ. ಗುರುವಿಗೆ ಸಹನೆಯಾಗಲಿಲ್ಲ. ಯಾವ ಮಾತೂ ಆಡದೆ ಜಾಗ ಖಾಲಿ ಮಾಡಿದರು. ಬೃಹಸ್ಪತ್ಯಾಚಾರ್ಯರು ಎಲ್ಲಿ ಹೋದರೆಂದು ಯಾರಿಗೂ ತಿಳಿಯಲಿಲ್ಲ. ಪುರೋಹಿತರ ಮಂತ್ರಬಲವಿಲ್ಲದ ದೇವಗಣ ಸುಲಭವಾಗಿ ಅಸುರರಿಗೆ ಸೋತಿತು.

**ಶುಕ್ರ -** ಬಿಳಿಯ ಬಟ್ಟೆಯನ್ನು ಧರಿಸಿದ ಬಿಳಿ ಶರೀರದ ದೈತ್ಯ ಮಂತ್ರಿ. ನಾಲ್ಕು ಕೈಗಳಲ್ಲಿ ದಂಡ, ವರಮುದ್ರೆ, ಕಮಂಡಲು, ಜಪಮಾಲೆಯನ್ನು ಧರಿಸಿರುವ ತಪಸ್ವಿ, ಶಾಸ್ತ್ರಾಸ್ತ್ರ ಕೋವಿದ. ಆಜಾನುಬಾಹು, ಸುಂದರ ಚಾರುವೃತ್ತ ತೊಡೆಗಳು, ಆಕರ್ಷಕ ಮುಖಕಾಂತಿ, ಮನಸೆಳೆಯುವ ಕೇಶರಾಶಿ, ಕಾಮುಕತೆ, ರಾಜಸ ಪ್ರಕೃತಿ, ಕ್ರೀಡಾತತ್ಪರ, ಬುದ್ಧಿವಂತ, ವಿಶಾಲನೇತ್ರ, ಸ್ಥೂಲಭುಜ, ಶುಭ್ರವರ್ಣದ ಬಟ್ಟೆ ಇವು ಶುಕ್ರನ ಲಕ್ಷಣಗಳು.



ಭೃಗು ಮಹರ್ಷಿಯ ಮಗ, ತಾಯಿ ಪುಲೋಮೆ. ಸಹೋದರ ಚ್ಯವನ. ಪತ್ನಿ ಊರ್ಜಸ್ವತಿ, ಮಗಳು ದೇವಯಾನಿ. ಕಂಡಾಮರ್ಕರು ಮಕ್ಕಳು.

ದೈತ್ಯರ ರಕ್ಷಣೆಗಾಗಿ ಬದ್ಧಕಚ್ಛಣದ ಬ್ರಾಹ್ಮಣ. ತಲೆಕೆಳಗೆ ಮಾಡಿ ಧೂಮಪಾನಮಾಡುತ್ತಾ ಸಹಸ್ರವರ್ಷ ತಪಸ್ಸನ್ನಾಚರಿಸಿ ಮೃತಸಂಜೀವಿನೀ ವಿದ್ಯೆಯನ್ನು ಪಡೆದ ಹಠವಾದಿ. ಆ ಮೂಲಕ ದೇವಾಸುರ ಯುದ್ಧದಲ್ಲಿ ಮಡಿದ ರಾಕ್ಷಸನ್ನು ಪುನಃ ಜೀವಿಸುವಂತೆ ಮಾಡಿದ. ಬಲಿಯು ಕೇಳದಿದ್ದಾಗ ಗಿಂಡಿಯ ತೂತಿನಲ್ಲಿ ಕುಳಿತು ಜಲಧರೆಯನ್ನು ತಡೆದ. ದರ್ಭೆಯಿಂದ ಚುಚ್ಚಿಸಿಕೊಂಡು ಒಕ್ಕಣ್ಣನಾದ.

ಶಿವನ ಶುಕ್ರ (ವೀರ್ಯ) ದಿಂದ ಜನಿಸಿದುದರಿಂದ ಶುಕ್ರನೆನಿಸಿದನೆಂಬ ಕಥೆ ಶಾಂತಿಪರ್ವದಲ್ಲಿದೆ. ಮಿಥುನಭಾವದಲ್ಲಿ ಪ್ರಸಿದ್ಧನಾದ ಅರ್ಧನಾರೀಶ್ವರನ ಶುಕ್ರದಿಂದ ಜನಿಸಿದುದರಿಂದಲೇ ಈತನಿಗೆ ಕಾಮುಕತೆ, ಶುಕ್ರಪ್ರಾಧಾನ್ಯಗಳು ಸ್ವರೂಪಗುಣವಾಗಿದೆ. ಆದ್ದರಿಂದಲೇ ಈತ ಸ್ತ್ರೀಕಾರಕ.

**ಶನಿ -** ನಾಲ್ಕು ಕೈಗಳಲ್ಲಿ ಬಿಲ್ಲು, ಬಾಣ, ಚರ್ಮ, ಶೂಲಗಳನ್ನು ಧರಿಸಿದ ಗೃಧ್ರವಾಹನ. ಇಂದ್ರನೀಲದಂತೆ ನೀಲಿ ಮೈಬಣ್ಣದ ಈತ ಮಂದಗತಿ. ಮಂದ, ಸ್ಥಿರ, ಶನೈಶ್ಚರ, ರವಿಸುತ ಇವು ಈತನ ಪ್ರಸಿದ್ಧನಾಮಗಳು. ಕಪ್ಪು ಎನಿಸಿದ ಕಡುನೀಲಿ ಬಣ್ಣದ ಶರೀರ, ಗುಳಿ ಬಿದ್ದ ಕಣ್ಣುಗಳು, ಚಾಡಿ ಹೇಳಿ ಜಗಳ ಹುಟ್ಟಿಸುವ ಸ್ವಭಾವ, ಕೋಲುದೇಹ, ಆಲಸ್ಯ,



ಮೂರ್ಖತೆ, ದೊಡ್ಡ ಉಗುರು-ಹಲ್ಲುಗಳು, ರೋಮ ಮುಚ್ಚಿದ ಶರೀರ, ತಾಮಸ ಪ್ರಕೃತಿ, ಅತಿಕೋಪ, ಮುಪ್ಪು, ಅತಿನೀಲಿ ಬಣ್ಣದ ಉಡುಗೆಗಳು. ಇದು ಶಾಸ್ತ್ರಜ್ಞರು ಶನಿಯನ್ನು ಕಂಡ ರೀತಿ.

ಸೂರ್ಯನಿಗೆ ಛಾಯಾದೇವಿಯಲ್ಲಿ ಹುಟ್ಟಿದ ಎರಡನೇ ಮಗ ಶನೈಶ್ಚರ. ಅಣ್ಣ ಸಾವರ್ಣಿ ಮನು. ತಂಗಿ ತಪತಿ. ಈತ ಗ್ರಹಗಳಲ್ಲಿ ತೀಕ್ಷ್ಣಗ್ರಹ, ಸ್ವಾಭಿಮಾನಿ.

ಮೇಷಾದಿರಾಶಿಗಳಲ್ಲಿ ಬಹಳ ನಿಧಾನವಾಗಿ ಸಂಚರಿಸುವುದರಿಂದ ಇವ "ಶನೈಶ್ಚರ" ಎಂದು ಹೆಸರು. "ಶನೈಃ"ಎಂದರೆ ಮೇಲ್ಭಾಗ ಎಂದರ್ಥ. ಚಂದ್ರನು ಎರಡೂ ಕಾಲುದಿನಗಳಲ್ಲಿ ಒಂದು ರಾಶಿಯನ್ನು ಕ್ರಮಿಸುತ್ತಾನೆ. ಸೂರ್ಯ ಒಂದು ತಿಂಗಳಲ್ಲಿ ಒಂದು ರಾಶಿಯಿಂದ ಸಂಕ್ರಮಿಸುತ್ತಾನೆ. ಆದರೆ ಶನಿ ಎರಡೂವರೆ ವರ್ಷಗಳ ತನಕ ಒಂದು ರಾಶಿಯಿಂದ ಕದಲುವುದಿಲ್ಲ. ಶ್ಥಿರವಾಗಿ ಕುಳಿತು ಬಿಡುತ್ತಾನೆ. ಆದ್ದರಿಂದಲೇ ಈತ ಸ್ಥಿರ. ಮಂದನಾಗಿ ಸಂಚರಿಸುವುದರಿಂದ ಮಂದ. ಶನೈಃ ಶನೈಃ ಸಾಗುವುದರಿಂದ ಶನಿ.

ಗ್ರಹಗಳು ಗೋಚಾರರೀತ್ಯಾ ರಾಶಿಗಳಲ್ಲಿರುವ ಕಾಲಮಾನ

ರವಿ 1 ತಿಂಗಳು, ಚಂದ್ರ 1 ದಿನ, ಕುಜ 2 1/2 ತಿಂಗಳು, ಬುಧ 1 ತಿಂಗಳು, ಗುರು 12 ತಿಂಗಳು, ಶುಕ್ರ 1 ತಿಂಗಳು, ಶನಿ 30 ತಿಂಗಳು, ರಾಹು – ಕೇತು 20 ತಿಂಗಳು

"ಶಂ ನಯತೀತಿ ಶನಿಃ" ಎಂಬ ವಿವಕ್ಷೆಯಿಂದ ಶನಿ ಎಂದರೆ ಮಂಗಳ ಸುಖಕಾರಕ ಎಂದರ್ಥ. ಏನಿದು? ಹಗಲು ಇರುವ ಕಾಯಿ ಹಾಗಲಕಾಯಿ ಎನ್ನುವಷ್ಟು ಅಬದ್ಧವಾದ ಅರ್ಥವನ್ನು ಮಾಡುತ್ತಿರುವಿರಲ್ಲಾ! ಕಾಟ ಕೊಡುವ ಶನಿ ಸುಖಕಾರಕನೇ? ಎನ್ನಬೇಡಿ. ಕಷ್ಟ ಕೊಡುವುದೂ ಸುಖಕ್ಕಾಗಿಯೇ. ಶನಿಗ್ರಹದ ಕಾಟವಿದೆಯೆಂದು ತಿಳಿದಾಗ ದೇವರ ನೆನಪಾಗುತ್ತದೆ. ಪೂಜೆ, ಜಪಗಳು ಆರಂಭವಾಗುತದೆ. "ಸಂಕಟಬಂದಾಗ ವೆಂಕಟರಮಣ" ಅಲ್ಲವೇ? ಪರಮಾತ್ಮನೂ ಹೇಳುತ್ತಾನೆ "ಯಸ್ಯಾನುಗ್ರಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಂ" ಒಬ್ಬನನ್ನು

ಮೇಲೆತ್ತಬೇಕೆಂದು ಬಯಸಿದರೆ ಅವನಿಗೆ ಕಾಟ ಕೊಡಲಾರಂಭಿಸುತ್ತೇನೆ. ಶನಿಯ ಕಾಟ ಕಹಿಯಾದ ಔಷಧಿಯಂತೆ ಪರಿಣಾಮದಲ್ಲಿ ಅಮೃತೋಪಸಮವಾದ ಸುಖಕ್ಕಾಗಿ.

ಏಳುವರೆ ಶನಿ :

ಈ ಶನಿ ತಾನು ಒಂದು ರಾಶಿಯಲ್ಲಿರುವ ಎರಡೂವರೆ ವರ್ಷದಲ್ಲಿ ಆ ರಾಶಿಯೇ ಜನ್ಮರಾಶಿಯಾಗಿ ಉಳ್ಳಜನರನ್ನು ಕಾಡುತ್ತಾನೆ. ಆ ರಾಶಿಯಲ್ಲಿದ್ದಾಗ ಮಾತ್ರವಲ್ಲ, ಅದರ ಇಕ್ಕೆಲಗಳಲ್ಲಿರುವ ರಾಶಿಯಲ್ಲಿದ್ದಗಲೂ ಕಾಡುತ್ತಾನೆ. ಹೀಗೆ ವೃಷಭರಾಶಿಯಲ್ಲಿರುವ ವ್ಯಕ್ತಿಗೆ ಮೇಷರಾಶಿಯಲ್ಲಿ ಶನಿಯಿದ್ದಾಗಲೇ ಶನಿಕಾಟ ಪ್ರಾರಂಭವಾಗುತ್ತದೆ. ಮಿಥುನರಾಶಿಯಲ್ಲಿ ಶನಿಚರಿಸುವ ಎರಡೂವರೆ ವರ್ಷಗಳ ಕಾಲವೂ ಇರುತ್ತದೆ.

ದೀರ್ಘಕಾಲದ ಶನಿಸಂಚಾರವನ್ನು ಕನ್ನಡದಲ್ಲಿ ಏಳೂವರೆ ಶನಿ ಎಂದು ಕರೆದರೆ ಹಿಂದಿಯಲ್ಲಿ ಸಾಡೇಸಾತ್ ಎನ್ನುತ್ತಾರೆ. ಒಮ್ಮೆ ಏಳೂವರೆ ಶನಿ ಮುಗಿದು ಮತ್ತೆ ಇಪ್ಪತ್ತೆರಡೂವರೆ ವರ್ಷಗಳಿಗೆ ಈ ಏಳೂವರೆ ಶನಿ ಸಂಚಾರ ಪ್ರಾಪ್ತವಾಗುತ್ತದೆ.

ದೇವತಾರಾಧನೆ, ಗ್ರಹಪೂಜೆಗಳಿಂದ ವಿಮುಖರಾದ ಜನರಿಗೆ ಸಂಕಟವನ್ನು ಕೊಡುವವನಾದ್ದರಿಂದಲೇ ಶನಿಗ್ರಹ ಹೆಚ್ಚು ಪ್ರಚಾರದಲ್ಲಿದ್ದಾನೆ.

**ರಾಹು -** ನಾಲ್ಕು ಕೈಗಳು, ಖಡ್ಗ, ಚರ್ಮ, ಶೂಲ, ವರಮುದ್ರೆಗಳು ಕೈಗಳಲ್ಲಿ ವಿಕೃತವಾದ ಕರಾಳಮುಖ, ಕಪ್ಪು ಸಿಂಹಾಸನದಲ್ಲಿ ಎರಿರುವ ಕಪ್ಪು ಬಟ್ಟೆಯ ಭಯಂಕರ ಗ್ರಹ. ಕಪ್ಪಾದ ಮೈಬಣ್ಣ, ದೀರ್ಘವಾದ ಕೂಲು ಶರೀರ. ವ್ರಣಾದಿಪೀಡೆ, ಪಾಷಡವಾದಿ, ಬಿಕ್ಕಳಿಕೆಯ ತೊದಲು ಮಾತು, ಸುಳ್ಳುಗಾರಿಕೆ, ಕಪಟ, ಕುಷ್ಠಾದಿರೋಗ, ಪರನಿಂದೆ, ಬುದ್ಧಿಹೀನತೆ, ಇವು ರಾಹುವಿನ ಲಕ್ಷಣ.

ದಕ್ಷನ ಮಗಳಾದ ಸಿಂಹಿಕೆಯ ಮಗ. ಅಮೃತಪ್ರಾಶನ ಸಂದರ್ಭದಲ್ಲಿ ವಿಷ್ಣು ಇವನ ಶಿರಚ್ಛೇದವನ್ನು ಮಾಡಿದನು. ವೇಷ ಪಲ್ಲಟಿಸಿದ ರಾಹುವನ್ನು ವಿಷ್ಣುವಿಗೆ ಸೂಚಿಸಿದವರು ಸೂರ್ಯ ಚಂದ್ರರು. ಆದ್ವೇಷದಿಂದ ಈತ ಗ್ರಹಣಕಾಲದಲ್ಲಿ ಸೂರ್ಯ ಚಂದ್ರರನ್ನು ನುಂಗುತ್ತಾನೆ ಎಂಬುದು ಶಾಸ್ತ್ರ ಸಂಪ್ರದಾಯದ ಮಾತು.



ಯಾರು ಈ ರಾಹು! ಕೇತು!

ಇನ್ನೊಂದು ದೃಷ್ಟಿಕೋನದಿಂದ ನೋಡುವುದಾದರೆ ರಾಹು-ಕೇತುಗಳು ರಾಶಿಚಕ್ರದ ಎರಡು ಬಿಂದುಗಳು. ರಾಶಿಚಕ್ರದ ಮಧ್ಯದಲ್ಲಿ ಗುರುತಿಸಬಹುದಾದ ಪರಸ್ಪರ ವಿರುದ್ಧ ದಿಕ್ಕಿನಲ್ಲಿರುವ ಎರಡು ಕಪ್ಪು ಬಿಂದುಗಳು. ಭೂಮಿಗೆ ಉತ್ತರ ಧ್ರುವ ದಕ್ಷಿಣದ್ರುವಗಳಿರುವಂತೆ. ಆದ್ದರಿಂದಲೇ ರಾಶಿಚಕ್ರದಲ್ಲಿ ರಾಹು, ಕೇತುಗಳ ಮಧ್ಯೆ ಸರಿಯಾಗಿ ಆರು ರಾಶಿಯ ಅಂತರವಿರುತ್ತದೆ. ಅಂದರೆ ಕೇತುವಿನಿಂದ ಏಳನೇ ರಾಶಿಯಲ್ಲಿ ರಾಹುವಿರುತ್ತಾನೆ. ಅವನಿಂದ ಏಳನೇ ಕೋಣೇಯಲ್ಲಿ ಕೇತುವಿರುತ್ತಾನೆ. ಉದಾಹರಣೆಗೆ ರಾಹು ಮೇಷದಲ್ಲಿದ್ದರೆ ಕೇತು ತುಲಾದಲ್ಲಿರುತ್ತಾನೆ. ರಾಹು ವೃಷಭಕ್ಕೆ ಚಲಿಸಿದ ಕ್ಷಣದಲ್ಲಿಯೇ ಕೇತು ವೃಶ್ಚಿಕಕ್ಕೆ ವಾಲಿರುತ್ತಾನೆ. ಗಡಿಯಾರದ ಮುಳ್ಳಿನ ತುದಿ ಹನ್ನೆರಡರಲ್ಲಿದ್ದಾಗ ಅದರ ಹಿಂತುದಿ ಅಲ್ಲಿರಲೇಬೇಕು. ಮುಂಬದಿ ಒಂದಕ್ಕೆ ಸಾಗಿದ ಕ್ಷಣದಲ್ಲಿಯೇ ಹಿಂತುದಿ ಏಳಕ್ಕೆ ವಾಲುತ್ತದೆ. ಹಾಗೆಯೇ ರಾಹುಕೇತುಗಳು ರಾಶಿಚಕ್ರದ ಹನ್ನೆರಡು ಬಿಂದುಗಳನ್ನು ಮಧ್ಯದಿಂದ ಭಾಗಿಸುವ ಮುಳ್ಳಿನ ಇಕ್ಕೆಲದ ಎರಡು ಬಿಂದುಗಳು. ರಾಶಿಚಕ್ರದಲ್ಲಿ ತಿರುಗುತ್ತಾ ಹುಣ್ಣಿಮೆ ಅಮಾವಾಸ್ಯೆಗಳಂದು ಚಂದ್ರ, ಸೂರ್ಯರು ರಾಹು, ಕೇತುಗಳಿರುವ ಸ್ಥಾನಕ್ಕೆ ಬಂದರೆ

ಗ್ರಹಣವಾಗಿದೆಯೆಂದು ತಿಳಿಯಬೇಕು. ರಾಹುವನ್ನು ಕಪ್ಪುಬಣ್ಣದ ನೆರಳು, ಕತ್ತಲೆ ಎಂಬ ಭಾವದಿಂದಲೇ ಛಾಯಾಗ್ರಹ, ತಮಃ ಎಂದು ಕರೆಯಲಾಗುತ್ತದೆ.

**ಕೇತು** - ಕೇತುಗಳು ನೂರು ಜನ. ಬ್ರಹ್ಮನ ಮಕ್ಕಳು. ಎರಡು ಕೈ, ವಿಚಿತ್ರಾಯುಧಧಾರಿಗಳು, ಗೃಧ್ರಾಸನಸ್ಥಿತರು. ಉಗ್ರವಾದ ಕೆಂಪು ಕಣ್ಣುಗಳು, ವಿಷಕಾರುವ ಮಾತು, ದೀರ್ಘಶರೀರ, ಶಸ್ತ್ರಧಾರಿ ಕೈಗಳು, ಆಚಾರಹೀನ, ಕಂದುಬಣ್ಣ, ದೂಮಸೇವನೆ, ಕಜ್ಜಿ, ಬೇನೆಗಳುಳ್ಳ ಶರೀರ, ಕ್ರೂರ ಸ್ವಭಾವ, ಇವು ಕೇತುವಿನ ಮಾಹಿತಿ.



# 3 ನವಗ್ರಹ ಕೋಷ್ಟಕ

## 3.1 ಕೋಷ್ಟಕ - 1

| ಗ್ರಹ | ಅಧಿದೇವತೆ | ಪ್ರತ್ಯಧಿದೇವತೆ | ನೈವೇದ್ಯ/ಚರು | ಸಮಿಧ |
| --- | --- | --- | --- | --- |
| ಸೂರ್ಯ | ರುದ್ರ | ಅಗ್ನಿ | ಗುಡಾನ್ನ | ಅರ್ಕ (ಎಕ್ಕ) |
| ಚಂದ್ರ | ರುದ್ರಾಣಿ | ಜಲ | ಪಾಯಸ | ಪಲಾಶ (ಮುತ್ತುಗ) |
| ಕುಜ | ಸ್ಕಂದ | ಪೃಥ್ವಿ | ಪರಿಮಳಯುಕ್ತ ಗಂಜಿ | ಖದಿರ |
| ಬುಧ | ವಿಷ್ಣು | ವಿಷ್ಣು | ಕ್ಷೀರಾನ್ನ | ಅಪಾಮಾರ್ಗ (ಉತ್ತರಣೆ) |
| ಗುರು | ಬ್ರಹ್ಮ | ಇಂದ್ರ | ಮೊಸರನ್ನ | ಅಶ್ವತ್ಥ |
| ಶುಕ್ರ | ಇಂದ್ರ | ಇಂದ್ರಾಣಿ | ಘೃತಾನ್ನ | ಔದುಂಬರ (ಅತ್ತಿ) |
| ಶನಿ | ಯಮ | ಪ್ರಜಾಪತಿ | ಎಳ್ಳುಮಿಶ್ರಿತಾನ್ನ | ಶಮೀ |
| ರಾಹು | ಕಾಲ | ಸರ್ಪ | ಕುಂಬಳಕಾಯಿ ಮತ್ತು ಉದ್ದು ಮಿಶ್ರಿತ ಅನ್ನ | ದೂರ್ವ (ಗರಿಕೆ) |
| ಕೇತು | ಚಿತ್ರಗುಪ್ತ | ಬ್ರಹ್ಮ | ಚಿತ್ರಾನ್ನ | ಕುಶ (ದರ್ಭೆ) |

## 3.2 ಕೋಷ್ಠಕ - 2

| ಗ್ರಹ | ಧಾನ್ಯ | ದಿಕ್ಕು | ವಸ್ತ್ರದ ಬಣ್ಣ | ಪ್ರತಿಮೆಯ ಲೋಹ |
|---|---|---|---|---|
| ಸೂರ್ಯ | ಗೋಧಿ | ಮಧ್ಯ | ಕೆಂಪು | ತಾಮ್ರ |
| ಚಂದ್ರ | ಅಕ್ಕಿ | ಆಗ್ನೇಯ | ಬಿಳಿ | ಬೆಳ್ಳಿ |
| ಕುಜ | ತೊಗರಿ | ದಕ್ಷಿಣ | ಕೆಂಪು | ತಾಮ್ರ |
| ಬುಧ | ಹೆಸರು | ಈಶಾನ್ಯ | ಹಳದಿ | ಚಿನ್ನ |
| ಗುರು | ಕಡಲೆ | ಉತ್ತರ | ಹಳದಿ | ಚಿನ್ನ |
| ಶುಕ್ರ | ಅವರೆ | ಪುರ್ವ | ಬಿಳಿ | ಬೆಳ್ಳಿ |
| ಶನಿ | ಎಳ್ಳು | ಪಶ್ಚಿಮ | ಕಪ್ಪು | ಕಬ್ಬಿಣ |
| ರಾಹು | ಉದ್ದು | ನೈರುತ್ಯ | ಕಪ್ಪು | ಸೀಸ |
| ಕೇತು | ಹುರುಳಿ | ವಾಯವ್ಯ | ಚಿತ್ರ | ಕಂಚು |

## 3.3 ಕೋಷ್ಠಕ - 3

| ಗ್ರಹ | ಬೀಜ ಮಂತ್ರ | ತಾಂತ್ರಿಕ ಮಂತ್ರ | ಜಪಸಂಖ್ಯೆ |
|---|---|---|---|
| ಸೂರ್ಯ | ಓಂ ಹ್ರಾಂ ಹ್ರೀಂ ಹ್ರೌಂ ಸಃ ಸೂರ್ಯಾಯ ನಮಃ | ಓಂ ಘೃಣಿಃ ಸೂರ್ಯಾಯ ನಮಃ | 7000 |
| ಚಂದ್ರ | ಓಂ ಶ್ರಾಂ ಶ್ರೀಂ ಶ್ರೌಂ ಸಃ ಸೋಮಾಯ ನಮಃ | ಓಂ ಸೋಂ ಸೋಮಾಯನಮಃ | 11000 |

| | | | |
|---|---|---|---|
| ಕುಜ | ಓಂ ಕ್ರಾಂ ಕ್ರೀಂ ಕ್ರೌಂ ಸಃ ಭೌಮಾಯ ನಮಃ | ಓಂ ಅಂ ಅಂಗಾರಕಾಯ ನಮಃ | 10000 |
| ಬುಧ | ಓಂ ಬ್ರಾಂ ಬ್ರೀಂ ಬ್ರೌಂ ಸಃ ಬುಧಾಯ ನಮಃ | ಓಂ ಬುಂ ಬುಧಾಯ ನಮಃ | 4000 |
| ಗುರು | ಓಂ ಗ್ರಾಂ ಗ್ರಿಂ ಗ್ರೌಂ ಸಃ ಬೃಹಸ್ಪತಯೇ ನಮಃ | ಓಂ ಬೃಂ ಬೃಹಸ್ಪತಯೇ ನಮಃ | 19000 |
| ಶುಕ್ರ | ಓಂ ದ್ರಾಂ ದ್ರೀಂ ದ್ರೌಂ ಸಃ ಶುಕ್ರಾಯ ನಮಃ | ಓಂ ಶುಂ ಶುಕ್ರಾಯ ನಮಃ | 19000 |
| ಶನಿ | ಓಂ ಪ್ರಾಂ ಪ್ರೀಂ ಪ್ರೌಂ ಸಃ ಶನೈಶ್ಚರಾಯ ನಮಃ | ಓಂ ಶಂ ಶನೈಶ್ಚರಾಯ ನಮಃ | 23000 |
| ರಾಹು | ಓಂ ಭ್ರಾಂ ಭ್ರೀಂ ಭ್ರೌಂ ಸಃ ರಾಹವೇ ನಮಃ | ಓಂ ರಾಂ ರಾಹವೇ ನಮಃ | 18000 |
| ಕೇತು | ಓಂ ಸ್ರಾಮ ಸ್ರೀಂ ಸ್ರೌಂ ಸಃ ಕೇತವೇ ನಮಃ | ಓಂ ಕೇಂ ಕೇತವೇ ನಮಃ | 17000 |

## 3.4 ಕೋಷ್ಟಕ - 4

| ಗ್ರಹ | ಫಲ | ಭುಜಗಳು | ವಾಹನ | ರತ್ನ |
|---|---|---|---|---|
| ಸೂರ್ಯ | ದ್ರಾಕ್ಷಿ | ದ್ವಿಭುಜ | ಸಪ್ತಾಶ್ವರಥ | ಮಾಣಿಕ್ಯ |
| ಚಂದ್ರ | ಕಬ್ಬು | ದ್ವಿಭುಜ | ದಶಾಶ್ವರಥ | ಮುತ್ತು |
| ಕುಜ | ಅಡಿಕೆ | ಚತುರ್ಭುಜ | ಆಡು | ಹವಳ |

| | | | | |
|---|---|---|---|---|
| ಬುಧ | ನಾಗರಂಗ | ಚತುರ್ಭುಜ | ಸಿಂಹ | ಪಚ್ಚೆ |
| ಗುರು | ಜಂಬೀರ | ಚತುರ್ಭುಜ | ಆನೆ | ಪುಷ್ಯರಾಗ |
| ಶುಕ್ರ | ಸೀಬೆ | ಚತುರ್ಭುಜ | ಕುದುರೆ | ವಜ್ರ |
| ಶನಿ | ಜಾಜಿ | ಚತುರ್ಭುಜ | ಹದ್ದು | ನೀಲ |
| ರಾಹು | ತೆಂಗು | ಚತುರ್ಭುಜ | ಸಿಂಹ | ಗೋಮೇಧ |
| ಕೇತು | ದಾಡಿಮ | ದ್ವಿಭುಜ | ಹದ್ದು | ವೈಡೂರ್ಯ |

## 3.5 ಕೋಷ್ಟಕ - 5

| **ಗ್ರಹ** | **ಅಪ್ಪ** | **ಅಮ್ಮ** | **ಹೆಂಡತಿ** | **ಮಕ್ಕಳು** |
|---|---|---|---|---|
| ಸೂರ್ಯ | ಕಶ್ಯಪ | ಅದಿತಿ | ಸಂಜ್ಞಾ ಮತ್ತು ಛಾಯಾ | ಯಮ, ಯಮುನೆ ಮತ್ತು ಮನು ಸಾವರ್ಣಿ ಶನೈಶ್ಚರ |
| ಚಂದ್ರ | ಪ್ರಜಾಪತಿ | ವಸುಘ್ನಿ | 27 ನಕ್ಷತ್ರ | ಬುಧ |
| ಕುಜ | ವಿಷ್ಣು | ಭೂದೇವಿ | ಜ್ವಾಲಿನಿ | - |
| ಬುಧ | ಚಂದ್ರ | ತಾರಾ | ಇಳೆ | ಪುರೂರವ |
| ಗುರು | ಆಂಗೀರಸ | ಸತಿ | ತಾರಾ | ಸ್ವಿಷ್ಟಕೃತ್, ವಡವಾಗ್ನಿ, ಕಚ + 3 & |

| | | | | |
|---|---|---|---|---|
| | | | | ಸ್ವಾಹಾ |
| ಶುಕ್ರ | ಭೃಗು | ಪುಲೋಮೆ | ಊರ್ಜಸ್ವತಿ | ದೇವಯಾನಿ, ಕಂಡಾಮರ್ಕ |
| ಶನಿ | ಸೂರ್ಯ | ಛಾಯಾ | ನೀಲಾ ದೇವಿ | - |
| ರಾಹು | - | ಸಿಂಹಿಕೆ | ಕರಾಲಿ | - |
| ಕೇತು | ಬ್ರಹ್ಮ | - | ಚಿತ್ರಲೇಖ | - |

## 3.6 ಕೋಷ್ಠಕ – 6

| **ಗ್ರಹ** | **ದಶಾಅವಧಿ** | **ರಾಶ್ಯಾಅಧಿಪತಿ** | **ಚಿಹ್ನೆ** | **ಗೋತ್ರ** |
|---|---|---|---|---|
| ಸೂರ್ಯ | 6 ವರ್ಷ | ಸಿಂಹ | ವರ್ತುಲ | ಕಶ್ಯಪ |
| ಚಂದ್ರ | 10 ವರ್ಷ | ಕರ್ಕಾಟಕ | ಚತುರಸ್ರ | ಅತ್ರಿ |
| ಕುಜ | 7 ವರ್ಷ | ಮೇಷ, ವೃಶ್ಚಿಕ | ತ್ರಿಕೋಣ | ಭರದ್ವಾಜ |
| ಬುಧ | 17 ವರ್ಷ | ಮಿಥುನ, ಕನ್ಯಾ | ಭಾಗಾಕಾರ | ಅತ್ರಿ |
| ಗುರು | 16 ವರ್ಷ | ಧನು, ಮೀನ | ಆಯತ | ಆಂಗಿರಸ |
| ಶುಕ್ರ | 20 ವರ್ಷ | ವೃಷಭ, ತುಲಾ | ಪಂಚಕೋಣ | ಭೃಗು |
| ಶನಿ | 19 ವರ್ಷ | ಮಕರ, ಕುಂಭ | ಬಿಲ್ಲು | ಕಶ್ಯಪ |
| ರಾಹು | 18 ವರ್ಷ | - | ಮೊರ | ಪೈಠಿನಸಿ |
| ಕೇತು | 7 ವರ್ಷ | - | ಧ್ವಜ | ಜೈಮಿನಿ |

# 4 ನವಗ್ರಹ ಆರಾಧನಾ ಸ್ವರೂಪ

ಈ ಗ್ರಹಾರಾಧನೆ ಸಾಮಾನ್ಯವಾಗಿ ಐದು ವಿಧ. ಪೂಜೆ, ಅಧ್ವರ, ಜಪ, ಸ್ತೋತ್ರ, ದಾನ ಎಂಬುದಾಗಿ.

## 4.1 ಪೂಜೆ

ನವಗ್ರಹಪೂಜೆಯಲ್ಲಿ ನವಗ್ರಹಪ್ರತಿಮೆಗಳು ಅಥವಾ ಆಯಾ ಧಾನ್ಯಗಳು ಪ್ರತೀಕವೆನಿಸುತ್ತವೆ. ಆದಿತ್ಯಾದಿ ನವಗ್ರಹದ ಪ್ರತಿಮೆ ಇರುವಲ್ಲಿಗೆ ಹೋಗಿ ಅಭಿಷೇಕಾದಿ ಪೂಜೆಗಳನ್ನು ಮಾಡಿಸಿ ಪ್ರದಕ್ಷಿಣೆ ನಮಸ್ಕಾರಗಳ ಮೂಲಕ ಗ್ರಹ ಪ್ರೀತಿಯನ್ನು ಸಂಪಾದಿಸಬಹುದು. ಈ ಸಂದರ್ಭದಲ್ಲಿ ಆಯಾ ಗ್ರಹಗಳಿಗೆ ಪ್ರಿಯವಾದ ನೈವೇದ್ಯವನ್ನು ನಿವೇದಿಸಹುದು. ಸೂರ್ಯನಿಗೆ ಗುಡಾನ್ನ ಚಂದ್ರನಿಗೆ ಪಾಯಸ, ಕುಜನಿಗೆ ಪರಿಮಳಿಸುವ ಗಂಜಿ, ಬುಧನಿಗೆ ಕ್ಷೀರನ್ನ, ಗುರುವಿಗೆ ಮೊಸರನ್ನ, ಶುಕ್ರನಿಗೆ ಘೃತಾನ್ನ, ಶನಿಗೆ ಎಳ್ಳುಮಿಶ್ರಿತಾನ್ನ (ಕೃಸರ) ರಾಹುವಿಗೆ ಕುಂಬಳಕಾಯಿ ಮತ್ತು ಉದ್ದುಮಿಶ್ರಿತವಾದ ಅನ್ನ (ಮಾಂಸ ಪ್ರತ್ಯಾಮ್ನಾಯ) ಹಾಗೂ ಕೇತುವಿಗೆ ಚಿತ್ರಾನ್ನವು ಅತ್ಯಂತ ಪ್ರಿಯವಾದ ಅನ್ನವೆನಿಸಿದ್ದು ಇದರ ನೈವೇದ್ಯ, ಆಹುತಿಗಳು ಗ್ರಹಪ್ರೀತಿಕರವೆಂದು ಹೇಳುತ್ತದೆ.

## 4.2 ಹೋಮ - ಅಧ್ವರ

ಅಧ್ವರ ಎಂದರೆ ಹೋಮ. ಅಗ್ನಿಯಲ್ಲಿ ಆಹುತಿಯನ್ನು ಕೊಡುವುದು. ನವಗ್ರಹಗಳ ಮಂತ್ರದಿಂದ ಪ್ರತ್ಯೇಕ ಪ್ರತ್ಯೇಕವಾಗಿ ಸಮಿತ್, ಚರು ಮತ್ತು ಆಜ್ಯಗಳಿಂದ 28 ಅಥವಾ 108 ಸಂಖ್ಯೆಯ ಆಹುತಿಗಳನ್ನು ಕೊಡಬೇಕು. ಚರು ಎಂದರೆ ಅನ್ನ, ಆಯಾಯ ಗ್ರಹಗಳಿಗೆ ಪ್ರಿಯವಾದ ಅನ್ನವನ್ನು ಹಿಂದೆ ಹೇಳಿದೆ.

ಸೂರ್ಯಾದಿಗ್ರಹಗಳಿಗೆ ಗುಡಾನ್ನವೇ ಮೊದಲಾದ ಆಯಾಯ ಅನ್ನದಿಂದಲೇ ಹೋಮಿಸುವುದು ಅತ್ಯಂತ ಉಚಿತ. ಹಾಗೆಯೇ ಪ್ರತಿಯೊಂದು ಗ್ರಹಗಳಿಗೂ ಅದರದೇ ಆದ ಸಮಿತ್ತುಗಳಿವೆ.

ಸೂರ್ಯನಿಗೆ ಅರ್ಕ (ಎಕ್ಕ) ಚಂದ್ರನಿಗೆ ಪಲಾಶ (ಮುತ್ತುಗ) ಕುಜನಿಗೆ ಖದಿರ, ಬುಧನಿಗೆ ಅಪಾಮಾರ್ಗ (ಉತ್ತರಣೆ) ಗುರುವಿಗೆ ಅಶ್ವತ್ಥ, ಶುಕ್ರನಿಗೆ ಔದುಂಬರ (ಅತ್ತಿ) ಶನಿಗೆ ಶಮೀ, ರಾಹುವಿಗೆ ದೂರ್ವ (ಗರಿಕೆ) ಹಾಗೂ ಕೇತುವಿಗೆ ಕುಶ (ದರ್ಭೆ). ಈ ಸಮಿತ್ತುಗಳಿಂದ, ಗುಡಾನ್ನಾದಿ ಚರುವಿನಿಂದ ಮತ್ತು ದನದ ತುಪ್ಪದಿಂದ ಹೋಮಿಸುವುದೇ ನವಗ್ರಹಹೋಮ.

ಒಂದೊಂದು ಸಮಿಧೆಯ ಹೋಮಕ್ಕೂ ಶಾಸ್ತ್ರಕಾರರು ಕೆಳಗಿನಂತೆ ಫಲಹೇಳುತ್ತಾರೆ.

ಅರ್ಕೇಣ ವ್ಯಾಧಿನಾಶಃ ಸ್ಯಾತ್ ಫಲಾಶೈಃ ಸರ್ವಸಂಪದಃ । ಖದಿರೇಣಾರ್ಥಸಿದ್ಧಿಃಸ್ಯಾತ್ ಅಪಾಮಾರ್ಗಃ ಸುಪುತ್ರದಃ ॥

ಆಶ್ವತ್ಥೇನ ಪ್ರಜಾವೃದ್ಧಿಃ ಸೌಭಾಗ್ಯಂ ಸ್ಯಾದೌದುಂಬರಾತ್ । ಶಮಿನಾ ಪಾಪಶಮನಂ ದೂರ್ವಯಾಯುಷ್ಯ ವರ್ಧನಂ ॥

ಕುಶೇನ ಬ್ರಹ್ಮವರ್ಚಃಸ್ಯಾದಿತ್ಯೇತದ್ಸಮಿಧಾಂ ಫಲಂ ॥

ಅರ್ಕ (ಎಕ್ಕ)ದಿಂದ ಪ್ರಾರಂಭಿಸಿ ಕುಶದ ತನಕ ಒಂಬತ್ತು ಸಮಿತ್ತುಗಳಿಂದ ಆದಿತ್ಯಾದಿ ನವಗ್ರಹಗಳಿಗೆ ಕ್ರಮವಾಗಿ ಹೋಮಿಸಿದಾಗ ಗ್ರಹಗಳು ದಯಪಾಲಿಸುವ ಫಲವನ್ನು ಹೇಳುತ್ತದೆ.

## 4.3 ಜಪ

ನವಗ್ರಹಗಳಿಗೆ ಸಂಬಂಧಿಸಿದ ಒಂಬತ್ತು ವೇದಮಂತ್ರಗಳಿವೆ. ಇದರ ಉಪದೇಶವಿದ್ದವರು ಜಪಮಾಡಬೇಕು. ಯಾವ ಗ್ರಹಗಳ ಜಪ ಎಷ್ಟು ಮಾಡಬೇಕೆಂಬುದರ ಬಗ್ಗೆ ಎರಡು ಕ್ರಮವಿದೆ. ಒಂದು ಕ್ರಮದಂತೆ ಜಪಸಂಖ್ಯೆಯನ್ನು ಕೋಷ್ಟಕದಲ್ಲಿ ಕೊಡಲಾಗಿದೆ. ಇನ್ನೊಂದು ಕ್ರಮದಂತೆ ಆಯಾಯ ಗ್ರಹಗಳ ದಶಾವರ್ಷಕ್ಕೆ ಅನುಗುಣವಾಗಿ ಜಪ ಮಾಡಬೇಕು. ಅಂದರೆ ಆದಿತ್ಯನ ದಶಾವರ್ಷ 6 ವರ್ಷವಾದ್ದರಿಂದ 6,000 ಸಂಖ್ಯೆಯಲ್ಲಿ ಆದಿತ್ಯನ ಜಪವಾಗಬೇಕು. ಹಾಗೆಯೇ ಚಂದ್ರನಿಗೆ 10,000, ಕುಜನಿಗೆ 7,000, ಬುಧನಿಗೆ 17,000, ಗುರುವಿಗೆ 16,000,

ಶುಕ್ರನಿಗೆ 20,000, ಶನೈಶ್ಚರನಿಗೆ 19,000, ರಾಹುವಿಗೆ 18,000, ಹಾಗೂ ಕೇತುವಿಗೆ 7,000 ಸಂಖ್ಯೆಯಲ್ಲಿ ಜಪವಾಗಬೇಕು. ಸ್ವಂತ ಕರ್ತೃವೇ ಇಷ್ಟು ಜಪಮಡುವುದು ದುಃಸಾಧ್ಯವಾದ್ದರಿಂದ ಶ್ರೋತ್ರಿಯ ಬ್ರಾಹ್ಮಣರ ಮೂಲಕ ಮಾಡಿಸಬಹುದು. ಯಥಾಶಕ್ತಿ ಗಾಯತ್ರೀ ಜಪದಿಂದಲೂ ಗ್ರಹದೋಷವನ್ನು ಪರಿಹರಿಸಿಕೊಳ್ಳಬಹುದು.

## 4.4 ಸ್ತೋತ್ರ

ಪುರಾಣಗಳಲ್ಲಿ ಬಂದ ಅಥವಾ ಅಪರೋಕ್ಷ ಜ್ಞಾನಿಗಳಿಂದ ರಚಿತವಾದ ನವಗ್ರಹ ಸ್ತೋತ್ರಗಳಿವೆ. ಇವನ್ನು ಪಠಿಸುವುದೂ ಗ್ರಹಪ್ರೀತಿ ಸಾಧಕವಾಗಿದೆ. ಸ್ತೋತ್ರಗಳನ್ನು ಜಾತಿ, ಮತ, ಲಿಂಗ, ವಯಸ್ಸು, ಸ್ಥಳ, ಸಮಯ, ಭೇಧವಿಲ್ಲದೆ ಎಲ್ಲರೂ ಪಠಿಸಬಹುದು. ಸಮಸ್ತ ಗ್ರಹಗಳನ್ನು ಸ್ತುತಿಸುವ ಸ್ತೋತ್ರಗಳೂ ಇವೆ, ಪ್ರತ್ಯೇಕ ಪ್ರತ್ಯೇಕವಾಗಿ ಗ್ರಹಗಳನ್ನು ಸ್ತುತಿಸುವ ಸ್ತೋತ್ರಗಳೂ ಇವೆ. ಸ್ತೋತ್ರವನ್ನು ಪಠಿಸುವಾಗ ಅರ್ಥಾನುಸಂಧಾನ, ಭಕ್ತಿ, ಶ್ರದ್ಧೆಗಳ ಸಂಗಮವಾದರೆ ತ್ರಿವೇಣಿಸಂಗಮವಾದಂತೆ ಪೂರ್ಣ ಫಲದಾಯಕವಾಗುತ್ತದೆ. ಮಂತ್ರೋಕ್ತವಾಗಿ ನವಗ್ರಹ ಆರಾಧನೆ ಮಾಡಲು ಸಾದ್ಯವಾಗದಿದ್ದಲ್ಲಿ ಸ್ತೋತ್ರರೂಪವಾಗಿ ಆಯಾ ಗ್ರಹಗಳ ಅಷ್ಟೋತ್ತರ ಶತನಾಮಾವಳಿಗಳಿಂದ ಆರಾಧಿಸಬಹುದು. ಆಯಾ ಗ್ರಹಗಳು ಮತ್ತು ದೇವತೆಗಳಿಗೆ ಅಷ್ಟೋತ್ತರ ಶತನಾಮಾವಳಿಯನ್ನು ಹೇಳಿಕೊಳ್ಳಲು ಕಾಲಾವಕಾಶವಿಲ್ಲದಿದ್ದಲ್ಲಿ ಸಂಕ್ಷಿಪ್ತವಾಗಿ ಶ್ಲೋಕಗಳನ್ನೇ ಸ್ತುತಿಸಬಹುದು.

## 4.5 ದಾನ

ಗ್ರಹಚಾರದೋಷ ಪರಿಹಾರದ ಹಲವು ಮಾರ್ಗಗಳಲ್ಲಿ ದಾನವೂ ಒಂದು. ನವಗ್ರಹಗಳಿಗೆ ಸಂಬಂಧಿಸಿದ ಧಾನ್ಯ, ಪ್ರತಿಮೆ, ರತ್ನ, ವಸ್ತ್ರಗಳನ್ನು ದಾನಕೊಡುವುದರ ಮೂಲಕ ಗ್ರಹದೋಷ ಪರಿಹಾರವೆಂದು ಶಾಸ್ತ್ರ ಹೇಳುತ್ತದೆ. ಸಶಕ್ತರು ಈ ನಾಲ್ಕೂ ದಾನಗಳನ್ನು ಕೊಡಬಹುದು. ಶಕ್ತಿಗನುಗುಣವಾಗಿ ಒಂದೋ ಎರಡೋ ದಾನ ಮಾಡಬಹುದು. ಎಷ್ಟು ದಾನ ಕೊಡುತ್ತಿದ್ದೇನೆ ಎನ್ನುವುದಕ್ಕಿಂತಲೂ ಕೊಡುವಾತನ ನಿರ್ವಂಚನೆ ಬುದ್ಧಿ ಮತ್ತು ಸ್ವೀಕರ್ತೃವಿನ ಪಾತ್ರತೆಯು ದಾನದ ಸಾಫಲ್ಯದಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತದೆ.

ಗ್ರಹಗಳ ಧಾನ್ಯ, ರತ್ನ ಮತ್ತು ವಸ್ತ್ರದ ಬಣ್ಣಗಳನ್ನು ಗಮನಿಸಿದವರಿಗೆ ಅವುಗಳಿಗಿರುವ ಪರಸ್ಪರ ಸಂಬಂಧ ಗೋಚರಿಸುತ್ತದೆ. ಸೂರ್ಯನ ಬಣ್ಣ ಕೆಂಪು ಆದ್ದರಿಂದಲೇ ಕೆಂಪಾದ ತಾಮ್ರ ಅವನ ಲೋಹ. ಕೆಂಪಾದ ಮಾಣಿಕ್ಯವೇ ಅವನ ರತ್ನ. ಅವನ ಪ್ರೀತಿಗಾಗಿ ಕೆಂಪುವಸ್ತ್ರವನ್ನು ದಾನಮಾಡಬೇಕು. ಕೆಂಪುಗೋಧಿ ಅವನಿಗೆ ಸಂಬಂಧಿಸಿದ ಧಾನ್ಯ.

ಹೀಗೆಯೇ ಚಂದ್ರನ ಬಣ್ಣ ಬಿಳಿ, ಬಿಳಿಯಾದ ಅಕ್ಕಿ, ಬೆಳ್ಳಿ ಮತ್ತು ದೌತ ವಸ್ತ್ರಗಳು ಅವನಿಗೆ ಸಂಬಂಧಿಸಿವೆ. ಚಂದ್ರನ ಧಾನ್ಯ ಅಕ್ಕಿ (ತಂಡುಲ). ತಿನ್ನಬಹುದಾದ ಸ್ಥಿತಿಯಲ್ಲಿರುವ ಧಾನ್ಯವನ್ನು ದಾನಮಾಡಬೇಕು. ಅಲ್ಲದೇ ಚಂದ್ರನಿಗೆ ಬಿಳಿಯಾದ ಬಟ್ಟೆಯನ್ನು, ಬಿಳಿಯದಾದ ಮುತ್ತನ್ನೂ ಹೇಳಿದೆ

ಹೆಚ್ಚಿನ ಮಾಹಿತಿ ಕೋಷ್ಠಕದಲ್ಲಿ ತಿಳಿಯಿರಿ.

ದಾನಕೊಡುವ ಎಲ್ಲ ವಸ್ತುಗಳಲ್ಲಿ ಗ್ರಹಗಳನ್ನು ಆವಾಹಿಸಿ, ಗ್ರಹಮಂತ್ರಗಳಿಂದ ಅಭಿಮಂತ್ರಿಸಿ, ಪೂಜಿಸಿ, ಅರ್ಚಿಸಿ, ಆವಾಹಿತ ದೇವತೆಗಳನ್ನು ವಿಸರ್ಜಿಸಿ ದಾನಕೊಡುವುದು ಉತ್ತಮ.

ದಾನ ಪಡೆದವನು ಏನು ಮಾಡಬೇಕು? ತಾನು ಪಡೆದ ಧಾನ್ಯವನ್ನು ಉಪಯೋಗಿಸಬೇಕು. ಗೋಗ್ರಾಸವಾಗಿ ಉಪಯೋಗಿಸುವುದೂ ಅಪರಾಧವಲ್ಲ. ಅದಕ್ಕಿಂತಲೂ ಮುಖ್ಯವಾಗಿ ಗಾಯತ್ರೀ ಜಪ, ಕೃಚ್ಛ್ರ ಮಂತ್ರಾದಿ ಜಪಗಳನ್ನು ಮಾಡಬೇಕು. ಏಕೆಂದರೆ, ''ಪ್ರತಿಗ್ರಹಾದ್ಧಿ ವಿಪ್ರಸ್ಯ ಪುಣ್ಯಹಾನಿ ಪ್ರಜಾಯತೇ । ಜಪಾಧ್ಯಜಪಾಧಯನ್ ದಾನಾದ್ಯೈಃಪುನಃಪೂರಣಮಾಚರೇತ್ ॥'' ಎಂಬ ಮಾತಿದೆ. ದಾನ ತೆಗೆದುಕೊಳ್ಳುವುದ್ರಿಂದ ಬ್ರಾಹ್ಮಣನ ಪುಣ್ಯಹಾನಿಯಾಗುತ್ತದೆ. ಹಾನಿಯಾದುದನ್ನು ತುಂಬಿಸಿಕೊಳ್ಳುವಲ್ಲಿ ಮುಖ್ಯವಾಗಿ ಮೂರು ದಾರಿಗಳು. ಅವೆಂದರೆ ಜಪ, ಶಾಸ್ತ್ರಾಧ್ಯಯನ ಮತ್ತು ದಾನ.

# 5 ನವಗ್ರಹ ಮಂತ್ರಗಳು

## 5.1 ನವಗ್ರಹ ಸೂಕ್ತ

॥ ಸಂಕಲ್ಪಃ ॥ ಮಮೋಪಾತ್ತ-ಸಮಸ್ತ-ದುರಿತಕ್ಷಯದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಆದಿತ್ಯಾದಿ ನವಗ್ರಹ ದೇವತಾ ಪ್ರಸಾದ ಸಿದ್ಧ್ಯರ್ತಂ ಆದಿತ್ಯಾದಿ ನವಗ್ರಹ ನಮಸ್ಕಾರಾನ್ ಕರಿಷ್ಯೇ ॥

(ಗೃಹ – ಆದಿತ್ಯ, ಅಧಿದೇವತಾ – ಅಗ್ನಿ, ಪ್ರತ್ಯಧಿದೇವತಾ – ಪಶುಪತಿ) ಓಂ ಆ ಸತ್ಯೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ । ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾ ವಿಪಶ್ಯನ್ ॥ ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ । ಅಸ್ಯ ಯಜ್ಞಸ್ಯ ಸುಕ್ರತುಂ ॥ ಯೇಷಾಮೀಶೇ ಪಶುಪತಿಃ ಪಶೂನಾಂ ಚತುಷ್ಪದಾಮುತ ಚ ದ್ವಿಪದಾಂ । ನಿಷ್ಕ್ರೀತೋಽಯಂ ಯಜ್ಞಿಯಂ ಭಾಗಮೇತು ರಾಯಸ್ಪೋಷಾ ಯಜಮಾನಸ್ಯ ಸಂತು ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ಆದಿತ್ಯಾಯ ನಮಃ ॥ 1 ॥

(ಗೃಹ – ಅಂಗಾರಕ / ಕುಜ, ಅಧಿದೇವತಾ – ಪೃಥಿವಿ, ಪ್ರತ್ಯಧಿದೇವತಾ – ಕ್ಷೇತ್ರಪತಿ) ಓಂ ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಂ । ಅಪಾಗ್ಂ ರೇತಾಗ್ಂಸಿ ಜಿನ್ವತಿ ॥ ಸ್ಯೋನಾ ಪೃಥಿವಿ ಭವಾ ನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಾಃ ॥ ಕ್ಷೇತ್ರಸ್ಯ ಪತಿನಾ ವಯಗ್ಂ ಹಿತೇನೇವ ಜಯಾಮಸಿ । ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಡಾತೀದೃಶೇ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ಅಂಗಾರಕಾಯ ನಮಃ ॥ 2 ॥

(ಗೃಹ – ಶುಕ್ರ, ಅಧಿದೇವತಾ – ಇಂದ್ರಾಣಿ, ಪ್ರತ್ಯಧಿದೇವತಾ – ಇಂದ್ರ) ಓಂ ಪ್ರ ವಃ ಶುಕ್ರಾಯ ಭಾನವೇ ಭರಧ್ವಂ । ಹವ್ಯಂ ಮತಿಂ ಚಾಗ್ನಯೇ ಸುಪೂತಂ ॥ ಯೋ ದೈವ್ಯಾನಿ ಮಾನುಷಾ ಜನೂಗ್ಂಷಿ । ಅಂತರ್ವಿಶ್ವಾನಿ ವಿದ್ಮನಾ ಜಿಗಾತಿ ॥ ಇಂದ್ರಾಣೀಮಾಸು ನಾರಿಷು ಸುಪತ್ನೀಮಹಮಶ್ರವಂ । ನ ಹ್ಯಸ್ಯಾ ಅಪರಂ ಚನ ಜರಸಾ ಮರತೇ ಪತಿಃ ॥ ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ ।

ಅಸ್ಮಾಕಮಸ್ತು ಕೇವಲಃ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ಶುಕ್ರಾಯ ನಮಃ ॥ 3 ॥

(ಗೃಹ – ಚಂದ್ರ / ಸೋಮ, ಅಧಿದೇವತಾ – ಆಪ, ಪ್ರತ್ಯಧಿದೇವತಾ – ಗೌರಿ) ಓಂ ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಂ । ಭವಾ ವಾಜಸ್ಯ ಸಂಗಥೇ ॥ ಅಪ್ಸುಮೇ ಸೋಮೋ ಅಬ್ರವೀದನ್ತರ್ವಿಶ್ವಾನಿ ಭೇಷಜಾ । ಅಗ್ನಿಂ ಚ ವಿಶ್ವಶಂಭುವಂ । ಆಪಶ್ಚ ವಿಶ್ವಭೇಷಜೀಃ ॥ ಗೌರೀ ಮಿಮಾಯ ಸಲಿಲಾನಿ ತಕ್ಷತೀ । ಏಕಪದೀ ದ್ವಿಪದೀ ಸಾ ಚತುಷ್ಪದೀ । ಅಷ್ಟಾಪದೀ ನವಪದೀ ಬಭೂವುಷೀ । ಸಹಸ್ರಾಕ್ಷರಾ ಪರಮೇ ವ್ಯೋಮನ್ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ಸೋಮಾಯ ನಮಃ ॥ 4 ॥

(ಗೃಹ – ಬುಧ, ಅಧಿದೇವತಾ – ವಿಷ್ಣು, ಪ್ರತ್ಯಧಿದೇವತಾ – ಪುರುಷ / ನಾರಾಯಣ) ಓಂ ಉದ್ಬುಧ್ಯಸ್ವಾಗ್ನೇ ಪ್ರತಿ ಜಾಗೃಹ್ಯೇನಮಿಷ್ಟಾಪೂರ್ತೇ ಸಗ್ಂ ಸೃಜೇಥಾಮಯಂ ಚ । ಪುನಃ ಕೃಣ್ವಗ್ಂಸ್ತ್ವಾ ಪಿತರಂ ಯುವಾನಮನ್ವಾತಾಗ್ಂಸೀತ್ತ್ವಯಿ ತಂತುಮೇತಂ ॥ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಂ । ಸಮೂಢಮಸ್ಯ ಪಾಗ್ಂಸುರೇ ॥ ವಿಷ್ಣೋ ರರಾಟಮಸಿ ವಿಷ್ಣೋಃ ಪೃಷ್ಠಮಸಿ ವಿಷ್ಣೋಃ ಶ್ನಪ್ತ್ರೇ ಸ್ಥೋ ವಿಷ್ಣೋಃ ಸ್ಯೂರಸಿ ವಿಷ್ಣೋರ್ಧ್ರುವಮಸಿ ವೈಷ್ಣವಮಸಿ ವಿಷ್ಣವೇ ತ್ವಾ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ಬುಧಾಯ ನಮಃ ॥ 5 ॥

(ಗೃಹ – ಬೃಹಸ್ಪತಿ, ಅಧಿದೇವತಾ – ಇಂದ್ರಮರುತ್ವ, ಪ್ರತ್ಯಧಿದೇವತಾ – ಬ್ರಹ್ಮ) ಓಂ ಬೃಹಸ್ಪತೇ ಅತಿ ಯದರ್ಯೋ ಅರ್ಹಾದ್ದ್ಯುಮದ್ವಿಭಾತಿ ಕ್ರತುಮಜ್ಜನೇಷು । ಯದ್ದೀದಯಚ್ಛವಸ ರ್ತಪ್ರಜಾತ ತದಸ್ಮಾಸು ದ್ರವಿಣಂ ಧೇಹಿ ಚಿತ್ರಂ ॥ ಇಂದ್ರ ಮರುತ್ವ ಇಹ ಪಾಹಿ ಸೋಮಂ ಯಥಾ ಶಾರ್ಯಾತೇ ಅಪಿಬಃ ಸುತಸ್ಯ । ತವ ಪ್ರಣೀತೀ ತವ ಶೂರ ಶರ್ಮನ್ನಾ ವಿವಾಸಂತಿ ಕವಯಃ ಸುಯಜ್ಞಾಃ ॥ ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿ ಸೀಮತಸ್ಸುರುಚೋ ವೇನ ಆವಃ । ಸ ಬುಧ್ನಿಯಾ ಉಪಮಾ

ಅಸ್ಯ ವಿಷ್ಠಾಂಸ್ಸ್ನತಶ್ಚ ಯೋನಿಮಸತಶ್ಚ ವಿವಃ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ಬೃಹಸ್ಪತಯೇ ನಮಃ ॥ 6 ॥

(ಗೃಹ – ಶನೈಶ್ಚರ, ಅಧಿದೇವತಾ – ಪ್ರಜಾಪತಿ, ಪ್ರತ್ಯಧಿದೇವತಾ – ಯಮ) ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥ ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಗ್ಂ ಸ್ಯಾಮ ಪತಯೋ ರಯೀಣಾಂ ॥ ಇಮಂ ಯಮ ಪ್ರಸ್ತರಮಾ ಹಿ ಸೀದಾಂಗಿರೋಭಿಃ ಪಿತೃಭಿಃ ಸಂವಿದಾನಃ । ಆ ತ್ವಾ ಮಂತ್ರಾಃ ಕವಿಶಸ್ತಾ ವಹಂತ್ವೇನಾ ರಾಜನ್ ಹವಿಷಾ ಮಾದಯಸ್ವ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ಶನೈಶ್ಚರಾಯ ನಮಃ ॥ 7 ॥

(ಗೃಹ – ರಾಹು, ಅಧಿದೇವತಾ – ಸರ್ಪ, ಪ್ರತ್ಯಧಿದೇವತಾ – ನಿಋರತಿ) ಓಂ ಕಯಾ ನಶ್ಚಿತ್ರ ಆಭುವದೂತೀ ಸದಾವೃಧಸ್ಸಖಾ । ಕಯಾ ಶಚಿಷ್ಠಯಾ ವೃತಾ ॥ ಆऽಯಂ ಗೌಃ ಪೃಶ್ನಿರಕ್ರಮೀದಸನನ್ಮಾತರಂ ಪುನಃ । ಪಿತರಂ ಚ ಪ್ರಯಂಥ್ಸುವಃ ॥ ಯತ್ತೇ ದೇವೀ ನಿರೃತಿರಾಬಬಂಧ ದಾಮ ಗ್ರೀವಾಸ್ವವಿಚರ್ತ್ಯಂ । ಇದಂ ತೇ ತದ್ವಿಷ್ಯಾಮ್ಯಾಯುಷೋ ನ ಮಧ್ಯಾದಥಾ ಜೀವಃ ಪಿತುಮದ್ಧಿ ಪ್ರಮುಕ್ತಃ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತಾಯ ರಾಹವೇ ನಮಃ ॥ 8 ॥

(ಗೃಹ – ಕೇತು, ಅಧಿದೇವತಾ – ಬ್ರಹ್ಮಾ, ಪ್ರತ್ಯಧಿದೇವತಾ – ಚಿತ್ರಗುಪ್ತ) ಓಂ ಕೇತುಂ ಕೃಣ್ವನ್ನಕೇತವೇ ಪೇಶೋ ಮರ್ಯಾ ಅಪೇಶಸೇ । ಸಮುಷದ್ಭಿರಜಾಯಥಾಃ ॥ ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಂ । ಶ್ಯೇನೋ ಗೃಧ್ರಾಣಾಗ್ ಸ್ವಧಿತಿರ್ವನಾನಾಗ್ಂ ಸೋಮಃ ಪವಿತ್ರಮತ್ಯೇತಿ ರೇಭನ್ನ್ ॥ ಸ ಚಿತ್ರ ಚಿತ್ರಂ ಚಿತಯಂತಮಸ್ಮೇ ಚಿತ್ರಕ್ಷತ್ರ ಚಿತ್ರತಮಂ ವಯೋಧಾಂ । ಚಂದ್ರಂ ರಯಿಂ ಪುರುವೀರಂ ಬೃಹಂತಂ ಚಂದ್ರ ಚಂದ್ರಾಭಿರ್ಗೃಣತೇ ಯುವಸ್ವ ॥ ಓಂ ಅಧಿದೇವತಾ ಪ್ರತ್ಯಧಿದೇವತಾ ಸಹಿತೇಭ್ಯಃ ಕೇತುಭ್ಯೋ ನಮಃ ॥ 9 ॥

॥ ಓಂ ಆದಿತ್ಯಾದಿ ನವಗ್ರಹ ದೇವತಾಭ್ಯೋ ನಮೋ ನಮಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## 5.2 ಸೂರ್ಯ/ಸೌರ ಸೂಕ್ತ - ಋಗ್ವೇದೀಯ

ಓಂ ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ ॥1॥ ಅಪ ತ್ಯೇ ತಾಯವೋ ಯಥಾ ನಕ್ಷತ್ರಾ ಯಂತ್ಯಕ್ತುಭಿಃ । ಸೂರಾಯ ವಿಶ್ವಚಕ್ಷಸೇ ॥2॥ ಅದೃಶ್ರಮಸ್ಯ ಕೇತವೋ ವಿ ರಶ್ಮಯೋ ಜನಾ ಅನು । ಭ್ರಾಜಂತೋ ಅಗ್ನಯೋ ಯಥಾ ॥3॥ ತರಣಿರ್ವಿಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ । ವಿಶ್ವಮಾ ಭಾಸಿ ರೋಚನಂ ॥4॥ ಪ್ರತ್ಯಙ್ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ । ಪ್ರತ್ಯಙ್ವಿಶ್ವಂ ಸ್ವರ್ದೃಶೇ ॥5॥ ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾ ಅನು । ತ್ವಂ ವರುಣ ಪಶ್ಯಸಿ ॥6॥ ವಿ ದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ । ಪಶ್ಯಂಜನ್ಮಾನಿ ಸೂರ್ಯ ॥7॥ ಸಪ್ತ ತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ । ಶೋಚಿಷ್ಕೇಶಂ ವಿಚಕ್ಷಣ ॥8॥ ಅಯುಕ್ತ ಸಪ್ತ ಶುಂಧ್ಯುವಃ ಸೂರೋ ರಥಸ್ಯ ನಪ್ತ್ಯಃ । ತಾಭಿರ್ಯಾತಿ ಸ್ವಯುಕ್ತಿಭಿಃ ॥9॥ ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಂ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ ॥10॥ ಉದ್ಯನ್ನದ್ಯ ಮಿತ್ರಮಹ ಆರೋಹನ್ನುತ್ತರಾಂ ದಿವಂ । ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥11॥ ಶುಕೇಷು ಮೇ ಹರಿಮಾಣಂ ರೋಪಣಾಕಾಸು ದಧ್ಮಸಿ । ಅಥೋ ಹಾರಿದ್ರವೇಷು ಮೇ ಹರಿಮಾಣಂ ನಿ ದಧ್ಮಸಿ ॥12॥ ಉದಗಾದಯಮಾದಿತ್ಯೋ ವಿಶ್ವೇನ ಸಹಸಾ ಸಹ । ದ್ವಿಷಂತಂ ಮಹ್ಯಂ ರಂಧಯನ್ಮೋ ಅಹಂ ದ್ವಿಷತೇ ರಧಂ ॥13॥ ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥14॥ ಸೂರ್ಯೋ ದೇವೀಮುಷಸಂ ರೋಚಮಾನಾಂ ಮರ್ಯೋ ನ ಯೋಷಾಮಭ್ಯೇತಿ ಪಶ್ಚಾತ್ । ಯತ್ರಾ ನರೋ ದೇವಯಂತೋ ಯುಗಾನಿ ವಿತನ್ವತೇ ಪ್ರತಿ ಭದ್ರಾಯ ಭದ್ರಂ ॥15॥ ಭದ್ರಾ ಅಶ್ವಾ ಹರಿತಃ ಸೂರ್ಯಸ್ಯ ಚಿತ್ರಾ ಏತಗ್ವಾ ಅನುಮಾದ್ಯಾಸಃ । ನಮಸ್ಯಂತೋ

ದಿವ ಆ ಪೃಷ್ಠಮಸ್ಥುಃ ಪರಿ ದ್ಯಾವಾಪೃಥಿವೀ ಯಂತಿ ಸದ್ಯಃ ॥16॥ ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾ ಕರ್ತೋರ್ವಿತತಂ ಸಂ ಜಭಾರ । ಯದೇದಯುಕ್ತ ಹರಿತಃ ಸಧಸ್ಥಾದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ ॥17॥ ತನ್ಮಿತ್ರಸ್ಯ ವರುಣಸ್ಯಾಭಿಚಕ್ಷೇ ಸೂರ್ಯೋ ರೂಪಂ ಕೃಣುತೇ ದ್ಯೋರುಪಸ್ಥೇ । ಅನಂತಮನ್ಯದ್ರುಶದಸ್ಯ ಪಾಜಃ ಕೃಷ್ಣಮನ್ಯದ್ಧರಿತಃ ಸಂ ಭರಂತಿ ॥18॥ ಅದ್ಯಾ ದೇವಾ ಉದಿತಾ ಸೂರ್ಯಸ್ಯ ನಿರಂಹಸಃ ಪಿಪೃತಾ ನಿರವದ್ಯಾತ್ । ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥19॥ ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥20॥ ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ । ತ ಆವವೃತ್ರಂತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ ವ್ಯುದ್ಯತೇ ॥21॥ ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ॥22॥ ಯತ್ವಾ ಸೂರ್ಯ ಸ್ವರ್ಭಾನುಸ್ತಮಸಾವಿಧ್ಯದಾಸುರಃ । ಅಕ್ಷೇತ್ರವಿದ್ಯಥಾ ಮುಗ್ಧೋ ಭುವನಾನ್ಯದೀಧಯುಃ ॥23॥ ಯದದ್ಯ ಸೂರ್ಯ ಬ್ರವೋಽನಾಗಾ ಉದ್ಯನ್ಮಿತ್ರಾಯ ವರುಣಾಯ ಸತ್ಯಂ । ವಯಂ ದೇವತ್ರಾದಿತೇ ಸ್ಯಾಮ ತವ ಪ್ರಿಯಾಸೋ ಅರ್ಯಮನ್ಗೃಣಂತಃ ॥24॥ ಉತ್ಸೂರ್ಯೋ ಬೃಹದರ್ಚೀಂಷ್ಯಶ್ರೇತ್ಪುರು ವಿಶ್ವಾ ಜನಿಮ ಮಾನುಷಾಣಾಂ । ಸಮೋ ದಿವಾ ದದೃಶೇ ರೋಚಮಾನಃ ಕ್ರತ್ವಾ ಕೃತಃ ಸುಕೃತಃ ಕರ್ತೃಭಿರ್ಭೂತ್ ॥25॥ ಸ ಸೂರ್ಯ ಪ್ರತಿ ಪುರೋ ನ ಉದ್ಗಾ ಏಭಿಃ ಸ್ತೋಮೇಭಿರೇತಶೇಭಿರೇವೈಃ । ಪ್ರ ನೋ ಮಿತ್ರಾಯ ವರುಣಾಯ ವೋಚೋಽನಾಗಸೋ ಅರ್ಯಮ್ಣೇ ಅಗ್ನಯೇ ಚ ॥26॥ ವಿ ನಃ ಸಹಸ್ರಂ ಶುರುಧೋ ರದಂತ್ವೃತಾವಾನೋ ವರುಣೋ ಮಿತ್ರೋ ಅಗ್ನಿಃ । ಯಚ್ಛಂತು ಚಂದ್ರಾ ಉಪಮಂ ನೋ ಅರ್ಕಮಾ ನಃ ಕಾಮಂ ಪೂಪುರಂತು ಸ್ತವಾನಾಃ ॥27॥ ಉದ್ವೇತಿ ಸುಭಗೋ ವಿಶ್ವಚಕ್ಷಾಃ ಸಾಧಾರಣಃ ಸೂರ್ಯೋ ಮಾನುಷಾಣಾಂ । ಚಕ್ಷುರ್ಮಿತ್ರಸ್ಯ ವರುಣಸ್ಯ

ದೇವಶ್ಚರ್ಮೇವ ಯಃ ಸಮವಿವ್ಯಕ್ತಮೋಂಸಿ ॥28॥ ಉದ್ವೇತಿ ಪ್ರಸವೀತಾ ಜನಾನಾಂ
ಮಹಾನ್ಕೇತುರರ್ಣವಃ ಸೂರ್ಯಸ್ಯ । ಸಮಾನಂ ಚಕ್ರಂ
ಪರ್ಯಾವಿವೃತ್ಸನ್ಯದೇತಶೋ ವಹತಿ ಧೂರ್ಷು ಯುಕ್ತಃ ॥29॥ ವಿಭ್ರಾಜಮಾನ
ಉಷಸಾಮುಪಸ್ಥಾದ್ರೇಭೈರುದೇತ್ಯನುಮದ್ಯಮಾನಃ । ಏಷ ಮೇ ದೇವಃ ಸವಿತಾ
ಚಚ್ಛಂದ ಯಃ ಸಮಾನಂ ನ ಪ್ರಮಿನಾತಿ ಧಾಮ ॥30॥ ದಿವೋ ರುಕ್ಮ ಉರುಚಕ್ಷಾ
ಉದೇತಿ ದೂರೇಅರ್ಥಸ್ತರಣಿರ್ಭ್ರಾಜಮಾನಃ । ನೂನಂ ಜನಾಃ ಸೂರ್ಯೇಣ ಪ್ರಸೂತಾ
ಅಯನ್ನರ್ಥಾನಿ ಕೃಣವನ್ನಪಾಂಸಿ ॥31॥ ಯತ್ರಾ ಚಕ್ರುರಮೃತಾ ಗಾತುಮಸ್ಮೈ
ಶ್ಯೇನೋ ನ ದೀಯನ್ನನ್ವೇತಿ ಪಾಥಃ ॥32॥ ಉದು ತ್ಯದ್ದರ್ಶತಂ ವಪುರ್ದಿವ ಏತಿ
ಪ್ರತಿಹ್ವರೇ । ಯದೀಮಾಶುರ್ವಹತಿ ದೇವ ಏತಶೋ ವಿಶ್ವಸ್ಮೈ ಚಕ್ಷಸೇ ಅರಂ ॥33॥
ಶೀರ್ಷ್ಣಃಶೀರ್ಷ್ಣೋ ಜಗತಸ್ತಸ್ಥುಷಸ್ಪತಿಂ ಸಮಯಾ ವಿಶ್ವಮಾ ರಜಃ । ಸಪ್ತ
ಸ್ವಸಾರಃ ಸುವಿತಾಯ ಸೂರ್ಯಂ ವಹಂತಿ ಹರಿತೋ ರಥೇ ॥34॥
ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್ । ಪಶ್ಯೇಮ ಶರದಃ ಶತಂ ಜೀವೇಮ ಶರದಃ
ಶತಂ ॥35॥ ಬಣ್ಮಹಾಁ ಅಸಿ ಸೂರ್ಯ ಬಳಾದಿತ್ಯ ಮಹಾ ಅಸಿ । ಮಹಸ್ತೇ ಸತೋ
ಮಹಿಮಾ ಪನಸ್ಯತೇಽದ್ಧಾ ದೇವ ಮಹಾ ಅಸಿ ॥36॥ ಬಟ್ ಸೂರ್ಯ ಶ್ರವಸಾ ಮಹಾಁ
ಅಸಿ ಸತ್ರಾ ದೇವ ಮಹಾಁ ಅಸಿ । ಮಹ್ನಾ ದೇವಾನಾಮಸುರ್ಯಃ ಪುರೋಹಿತೋ ವಿಭು
ಜ್ಯೋತಿರದಾಭ್ಯಂ ॥37॥ ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ
ತದೃತಂ ಸಪರ್ಯತ । ದೂರೇದೃಶೇ ದೇವಜಾತಾಯ ಕೇತವೇ ದಿವಸ್ಪುತ್ರಾಯ
ಸೂರ್ಯಾಯ ಶಂಸತ ॥38॥ ಸಾ ಮಾ ಸತ್ಯೋಕ್ತಿಃ ಪರಿ ಪಾತು ವಿಶ್ವತೋ ದ್ಯಾವಾ ಚ
ಯತ್ರ ತತನನ್ನಹಾನಿ ಚ । ವಿಶ್ವಮನ್ಯನ್ನಿ ವಿಶತೇ ಯದೇಜತಿ ವಿಶ್ವಾಹಾಪೋ
ವಿಶ್ವಾಹೋದೇತಿ ಸೂರ್ಯಃ ॥39॥ ನ ತೇ ಅದೇವಃ ಪ್ರದಿವೋ ನಿ ವಾಸತೇ
ಯದೇತಶೇಭಿಃ ಪತರೈ ರಥರ್ಯಸಿ । ಪ್ರಾಚೀನಮನ್ಯದನು ವರ್ತತೇ ರಜ ಉದನ್ಯೇನ
ಜ್ಯೋತಿಷಾ ಯಾಸಿ ಸೂರ್ಯ ॥40॥ ಯೇನ ಸೂರ್ಯ ಜ್ಯೋತಿಷಾ ಬಾಧಸೇ ತಮೋ
ಜಗಚ್ಚ ವಿಶ್ವಮುದಿಯರ್ಷಿ ಭಾನುನಾ ।
ತೇನಾಸ್ಮದ್ವಿಶ್ವಾಮನಿರಾಮನಾಹುತಿಮಪಾಮೀವಾಮಪ ದುಷ್ಷ್ವಪ್ನ್ಯಂ ಸುವ ॥41॥

ವಿಶ್ವಸ್ಯ ಹಿ ಪ್ರೇಷಿತೋ ರಕ್ಷಸಿ ವ್ರತಮಹೇಳಯನ್ನುಚ್ಚರಸಿ ಸ್ವಧಾ ಅನು । ಯದದ್ಯ ತ್ವಾ ಸೂರ್ಯೋಪಬ್ರವಾಮಹೈ ತಂ ನೋ ದೇವಾ ಅನು ಮಂಸೀರತ ಕ್ರತುಂ ॥42॥ ತಂ ನೋ ದ್ಯಾವಾಪೃಥಿವೀ ತನ್ನ ಆಪ ಇಂದ್ರಃ ಶೃಣ್ವಂತು ಮರುತೋ ಹವಂ ವಚಃ । ಮಾ ಶೂನೇ ಭೂಮ ಸೂರ್ಯಸ್ಯ ಸಂದೃಶಿ ಭದ್ರಂ ಜೀವಂತೋ ಜರಣಾಮಶೀಮಹಿ ॥43॥ ವಿಶ್ವಾಹಾ ತ್ವಾ ಸುಮನಸಃ ಸುಚಕ್ಷಸಃ ಪ್ರಜಾವಂತೋ ಅನಮೀವಾ ಅನಾಗಸಃ । ಉದ್ಯಂತಂ ತ್ವಾ ಮಿತ್ರಮಹೋ ದಿವೇದಿವೇ ಜ್ಯೋಗ್ಜೀವಾಃ ಪ್ರತಿ ಪಶ್ಯೇಮ ಸೂರ್ಯ ॥44॥ ಮಹಿ ಜ್ಯೋತಿರ್ಬಿಭ್ರತಂ ತ್ವಾ ವಿಚಕ್ಷಣ ಭಾಸ್ವಂತಂ ಚಕ್ಷುಷೇಚಕ್ಷುಷೇ ಮಯಃ । ಆರೋಹಂತಂ ಬೃಹತಃ ಪಾಜಸಸ್ಪರಿ ವಯಂ ಜೀವಾಃ ಪ್ರತಿ ಪಶ್ಯೇಮ ಸೂರ್ಯ ॥45॥ ಯಸ್ಯ ತೇ ವಿಶ್ವಾ ಭುವನಾನಿ ಕೇತುನಾ ಪ್ರ ಚೇರತೇ ನಿ ಚ ವಿಶಂತೇ ಅಕ್ತುಭಿಃ । ಅನಾಗಾಸ್ತ್ವೇನ ಹರಿಕೇಶ ಸೂರ್ಯಾಹ್ನಾಹ್ನಾ ನೋ ವಸ್ಯಸಾವಸ್ಯಸೋದಿಹಿ ॥46॥ ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ ಶಂ ಭಾನುನಾ ಶಂ ಹಿಮಾ ಶಂ ಘೃಣೇನ । ಯಥಾ ಶಮಧ್ವಂಛಮಸದ್ದುರೋಣೇ ತತ್ಸೂರ್ಯ ದ್ರವಿಣಂ ಧೇಹಿ ಚಿತ್ರಂ ॥47॥ ಅಸ್ಮಾಕಂ ದೇವಾ ಉಭಯಾಯ ಜನ್ಮನೇ ಶರ್ಮ ಯಚ್ಛತ ದ್ವಿಪದೇ ಚತುಷ್ಪದೇ । ಅದತ್ಪಿಬದೂರ್ಜಯಮಾನಮಾಶಿತಂ ತದಸ್ಮೇ ಶಂ ಯೋರರಪೋ ದಧಾತನ ॥48॥ ಯದ್ವೋ ದೇವಾಶ್ಚಕೃಮ ಜಿಹ್ವಯಾ ಗುರು ಮನಸೋ ವಾ ಪ್ರಯುತೀ ದೇವಹೇಳನಂ । ಅರಾವಾ ಯೋ ನೋ ಅಭಿ ದುಚ್ಛುನಾಯತೇ ತಸ್ಮಿಂತದೇನೋ ವಸವೋ ನಿ ಧೇತನ ॥49॥ ಸೂರ್ಯೋ ನೋ ದಿವಸ್ಪಾತು ವಾತೋ ಅಂತರಿಕ್ಷಾತ್ । ಅಗ್ನಿರ್ನಃ ಪಾರ್ಥಿವೇಭ್ಯಃ ॥50॥ ಜೋಷಾ ಸವಿತರ್ಯಸ್ಯ ತೇ ಹರಃ ಶತಂ ಸವಾँ ಅರ್ಹತಿ । ಪಾಹಿ ನೋ ದಿದ್ಯುತಃ ಪತಂತ್ಯಾಃ ॥51॥ ಚಕ್ಷುರ್ನೋ ದೇವಃ ಸವಿತಾ ಚಕ್ಷುರ್ನ ಉತ ಪರ್ವತಃ । ಚಕ್ಷುರ್ಧಾತಾ ದಧಾತು ನಃ ॥52॥ ಚಕ್ಷುರ್ನೋ ಧೇಹಿ ಚಕ್ಷುಷೇ ಚಕ್ಷುರ್ವಿಖ್ಯೈ ತನೂಭ್ಯಃ । ಸಂ ಚೇದಂ ವಿ ಚ ಪಶ್ಯೇಮ ॥53॥ ಸುಸಂದೃಶಂ ತ್ವಾ ವಯಂ ಪ್ರತಿ ಪಶ್ಯೇಮ ಸೂರ್ಯ । ವಿ ಪಶ್ಯೇಮ ನೃಚಕ್ಷಸಃ ॥54॥ ವಿಭ್ರಾಡ್ಬೃಹತ್ಪಿಬತು ಸೋಮ್ಯಂ ಮಧ್ವಾಯುರ್ದಧದ್ಯಜ್ಞಪತಾವವಿಹ್ರುತಂ । ವಾತಜೂತೋ ಯೋ ಅಭಿರಕ್ಷತಿ ತ್ಮನಾ

ಪ್ರಜಾಃ ಪುಪೋಷ ಪುರುಧಾ ವಿ ರಾಜತಿ ॥55॥ ವಿಭ್ರಾಡ್ಬೃಹತ್ಸುಭೃತಂ ವಾಜಸಾತಮಂ ಧರ್ಮಂದಿವೋ ಧರುಣೇ ಸತ್ಯಮರ್ಪಿತಂ । ಅಮಿತ್ರಹಾ ವೃತ್ರಹಾ ದಸ್ಯುಹಂತಮಂ ಜ್ಯೋತಿರ್ಜಜ್ಞೇ ಅಸುರಹಾ ಸಪತ್ನಹಾ ॥56॥ ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರುತ್ತಮಂ ವಿಶ್ವಜಿದ್ಧನಜಿದುಚ್ಯತೇ ಬೃಹತ್ । ವಿಶ್ವಭ್ರಾಡ್ಭ್ರಾಜೋ ಮಹಿ ಸೂರ್ಯೋ ದೃಶ ಉರು ಪಪ್ರಥೇ ಸಹ ಓಜೋ ಅಚ್ಯುತಂ ॥57॥ ವಿಭ್ರಾಜಂಜ್ಯೋತಿಷಾ ಸ್ವರಗಚ್ಛೋ ರೋಚನಂ ದಿವಃ । ಯೇನೇಮಾ ವಿಶ್ವಾ ಭುವನಾನ್ಯಾಭೃತಾ ವಿಶ್ವಕರ್ಮಣಾ ವಿಶ್ವದೇವ್ಯಾವತಾ ॥58॥ ಆಯಂ ಗೌಃ ಪೃಶ್ನಿರಕ್ರಮೀದಸದನ್ಮಾತರಂ ಪುರಃ । ಪಿತರಂ ಚ ಪ್ರಯಂತ್ಸ್ವಃ ॥59॥ ಅಂತಶ್ಚರತಿ ರೋಚನಾಸ್ಯ ಪ್ರಾಣಾದಪಾನತೀ । ವ್ಯಖ್ಯನ್ಮಹಿಷೋ ದಿವಂ ॥60॥ ತ್ರಿಂಶದ್ಧಾಮ ವಿ ರಾಜತಿ ವಾಕ್ಪತಂಗಾಯ ಧೀಯತೇ । ಪ್ರತಿ ವಸ್ತೋರಹ ದ್ಯುಭಿಃ ॥61॥ ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ । ತತೋ ರಾತ್ರ್ಯಜಾಯತ ತತಃ ಸಮುದ್ರೋ ಅರ್ಣವಃ ॥62॥ ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ । ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ ॥63॥ ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ । ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸ್ವಃ ॥64॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## 5.3 ಸೂರ್ಯೋಪನಿಷತ್ ಸೂರ್ಯಾಥರ್ವಶೀರ್ಷಂ ಚ

ಸೂದಿತಸ್ವಾತಿರಿಕ್ತಾರಿಸೂರಿನಂದಾತ್ಮಭಾವಿತಂ । ಸೂರ್ಯನಾರಾಯಣಾಕಾರಂ ನೌಮಿ ಚಿತ್ಸೂರ್ಯವೈಭವಂ ॥

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ॥ ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ ॥ ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ ॥

ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಹರಿಃ ಓಂ ಅಥ ಸೂರ್ಯಾಥರ್ವಾಂಗಿರಸಂ ವ್ಯಾಖ್ಯಾಸ್ಯಾಮಃ । ಬ್ರಹ್ಮಾ ಋಷಿಃ । ಗಾಯತ್ರೀ ಛಂದಃ । ಆದಿತ್ಯೋ ದೇವತಾ । ಹಂಸಃ ಸೋಽಹಮಗ್ನಿನಾರಾಯಣಯುಕ್ತಂ ಬೀಜಂ । ಹೃಲ್ಲೇಖಾ ಶಕ್ತಿಃ । ವಿಯದಾದಿಸರ್ಗಸಂಯುಕ್ತಂ ಕೀಲಕಂ । ಚತುರ್ವಿಧಪುರುಷಾರ್ಥಸಿದ್ಧ್ಯರ್ಥೇ ವಿನಿಯೋಗಃ ।

ಷಟ್ಸ್ವರಾರೂಢೇನ ಬೀಜೇನ ಷಡಂಗಂ ರಕ್ತಾಂಬುಜಸಂಸ್ಥಿತಂ । ಸಪ್ತಾಶ್ವರಥಿನಂ ಹಿರಣ್ಯವರ್ಣಂ ಚತುರ್ಭುಜಂ ಪದ್ಮದ್ವಯಾಭಯವರದಹಸ್ತಂ ಕಾಲಚಕ್ರಪ್ರಣೇತಾರಂ ಶ್ರೀಸೂರ್ಯನಾರಾಯಣಂ ಯ ಏವಂ ವೇದ ಸ ವೈ ಬ್ರಾಹ್ಮಣಃ ।

ಓಂ ಭೂರ್ಭುವಃಸುವಃ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ।

ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ । ಸೂರ್ಯಾದ್ವೈ ಖಲ್ವಿಮಾನಿ ಭೂತಾನಿ ಜಾಯಂತೇ । ಸೂರ್ಯಾದ್ಯಜ್ಞಃ ಪರ್ಜನ್ಯೋಽನ್ನಮಾತ್ಮಾ ನಮಸ್ತ ಆದಿತ್ಯ । ತ್ವಮೇವ ಪ್ರತ್ಯಕ್ಷಂ ಕರ್ಮಕರ್ತಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ವಿಷ್ಣುರಸಿ । ತ್ವಮೇವ ಪ್ರತ್ಯಕ್ಷಂ ರುದ್ರೋಽಸಿ । ತ್ವಮೇವ ಪ್ರತ್ಯಕ್ಷಮೃಗಸಿ । ತ್ವಮೇವ ಪ್ರತ್ಯಕ್ಷಂ ಯಜುರಸಿ । ತ್ವಮೇವ ಪ್ರತ್ಯಕ್ಷಂ ಸಾಮಾಸಿ । ತ್ವಮೇವ ಪ್ರತ್ಯಕ್ಷಮಥರ್ವಾಸಿ । ತ್ವಮೇವ ಸರ್ವಂ ಛಂದೋಽಸಿ । ಆದಿತ್ಯಾದ್ವಾಯುರ್ಜಾಯತೇ । ಆದಿತ್ಯಾದ್ಭೂಮಿರ್ಜಾಯತೇ । ಆದಿತ್ಯಾದಾಪೋ ಜಾಯಂತೇ । ಆದಿತ್ಯಾಜ್ಜ್ಯೋತಿರ್ಜಾಯತೇ । ಆದಿತ್ಯಾದ್ವ್ಯೋಮ ದಿಶೋ ಜಾಯಂತೇ । ಆದಿತ್ಯಾದ್ದೇವಾ ಜಾಯಂತೇ । ಆದಿತ್ಯಾದ್ವೇದಾ ಜಾಯಂತೇ । ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ । ಅಸಾವಾದಿತ್ಯೋ ಬ್ರಹ್ಮ । ಆದಿತ್ಯೋಽನ್ತಃಕರಣಮನೋಬುದ್ಧಿಚಿತ್ತಾಹಂಕಾರಾಃ । ಆದಿತ್ಯೋ ವೈ ವ್ಯಾನಃ

ಸಮಾನೋದಾನೋಽಪಾನಃ ಪ್ರಾಣಃ । ಆದಿತ್ಯೋ ವೈ ಶ್ರೋತ್ರತ್ವಕ್ಚಕ್ಷೂರಸನಘ್ರಾಣಾಃ । ಆದಿತ್ಯೋ ವೈ ವಾಕ್ಪಾಣಿಪಾದಪಾಯೂಪಸ್ಥಾಃ । ಆದಿತ್ಯೋ ವೈ ಶಬ್ದಸ್ಪರ್ಶರೂಪರಸಗಂಧಾಃ । ಆದಿತ್ಯೋ ವೈ ವಚನಾದಾನಾಗಮನವಿಸರ್ಗಾನಂದಾಃ । ಆನಂದಮಯೋ ಜ್ಞಾನಮಯೋ ವಿಜ್ಞಾನಾನಮಯ ಆದಿತ್ಯಃ । ನಮೋ ಮಿತ್ರಾಯ ಭಾನವೇ ಮೃತ್ಯೋರ್ಮಾ ಪಾಹಿ । ಭ್ರಾಜಿಷ್ಣವೇ ವಿಶ್ವಹೇತವೇ ನಮಃ । ಸೂರ್ಯಾದ್ಭವಂತಿ ಭೂತಾನಿ ಸೂರ್ಯೇಣ ಪಾಲಿತಾನಿ ತು । ಸೂರ್ಯೇ ಲಯಂ ಪ್ರಾಪ್ನುವಂತಿ ಯಃ ಸೂರ್ಯಃ ಸೋಽಹಮೇವ ಚ । ಚಕ್ಷುರ್ನೋ ದೇವಃ ಸವಿತಾ ಚಕ್ಷುರ್ನ ಉತ ಪರ್ವತಃ । ಚಕ್ಷುರ್ಧಾತಾ ದಧಾತು ನಃ । ಆದಿತ್ಯಾಯ ವಿದ್ಮಹೇ ಸಹಸ್ರಕಿರಣಾಯ ಧೀಮಹಿ । ತನ್ನಃ ಸೂರ್ಯಃ ಪ್ರಚೋದಯಾತ್ ।

ಸವಿತಾ ಪಶ್ಚಾತ್ತಾತ್ಸವಿತಾ ಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಧರಾತ್ತಾತ್ । ಸವಿತಾ ನಃ ಸುವತು ಸರ್ವತಾತಿಂ ಸವಿತಾ ನೋ ರಾಸತಾಂ ದೀರ್ಘಮಾಯುಃ । ಓಂಇತ್ಯೇಕಾಕ್ಷರಂ ಬ್ರಹ್ಮ । ಘೃಣಿರಿತಿ ದ್ವೇ ಅಕ್ಷರೇ । ಸೂರ್ಯ ಇತ್ಯಕ್ಷರದ್ವಯಂ । ಆದಿತ್ಯ ಇತಿ ತ್ರೀಣ್ಯಕ್ಷರಾಣಿ । ಏತಸ್ಯೈವ ಸೂರ್ಯಸ್ಯಾಷ್ಟಾಕ್ಷರೋ ಮನುಃ । ಯಃ ಸದಾಹರಹರ್ಜಪತಿ ಸ ವೈ ಬ್ರಾಹ್ಮಣೋ ಭವತಿ ಸ ವೈ ಬ್ರಾಹ್ಮಣೋ ಭವತಿ । ಸೂರ್ಯಾಭಿಮುಖೋ ಜಪ್ತ್ವಾ ಮಹಾವ್ಯಾಧಿಭಯಾತ್ಪ್ರಮುಚ್ಯತೇ । ಅಲಕ್ಷ್ಮೀರ್ನಶ್ಯತಿ । ಅಭಕ್ಷ್ಯಭಕ್ಷಣಾತ್ಪೂತೋ ಭವತಿ । ಅಗಮ್ಯಾಗಮನಾತ್ಪೂತೋ ಭವತಿ । ಪತಿತಸಂಭಾಷಣಾತ್ಪೂತೋ ಭವತಿ । ಅಸತ್ಸಂಭಾಷಣಾತ್ಪೂತೋ ಭವತಿ । ಮಧ್ಯಾಹ್ನೇ ಸೂರಾಭಿಮುಖಃ ಪಠೇತ್ । ಸದ್ಯೋತ್ಪನ್ನಪಂಚಮಹಾಪಾತಕಾತ್ಪ್ರಮುಚ್ಯತೇ । ಸೈಷಾಂ ಸಾವಿತ್ರೀಂ ವಿದ್ಯಾಂ ನ ಕಿಂಚಿದಪಿ ನ ಕಸ್ಮೈಚಿತ್ಪ್ರಶಂಸಯೇತ್ । ಯ ಏತಾಂ ಮಹಾಭಾಗಃ ಪ್ರಾತಃ ಪಠತಿ ಸ ಭಾಗ್ಯವಾಂಜಾಯತೇ । ಪಶೂನ್ವಿಂದತಿ । ವೇದಾರ್ಥಂ ಲಭತೇ । ತ್ರಿಕಾಲಮೇತಜ್ಜಪ್ತ್ವಾ ಕ್ರತುಶತಫಲಮವಾಪ್ನೋತಿ । ಯೋ ಹಸ್ತಾದಿತ್ಯೇ ಜಪತಿ ಸ

ಮಹಾಮೃತ್ಯುಂ ತರತಿ ಯ ಏವಂ ವೇದ ॥ ಇತ್ಯುಪನಿಷತ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## 5.4 ಸೂರ್ಯಾ ಚಂದ್ರಮಸಾ ಸೂಕ್ತ

ಓಂ ತಾ ಸೂರ್ಯಾಚಂದ್ರಮಸಾ ವಿಶ್ವಭೃತ್ತಮಾ ಮಹತ್ । ತೇಜೋ ವಸುಮದ್ರಾಜತೋ ದಿವಿ ॥ ಸಾಮಾತ್ಮಾನಾ ಚರತಃ ಸಾಮಚಾರಿಣಾ । ಯಯೋರ್ವ್ರತಂ ನ ಮಮೇ ಜಾತು ದೇವಯೋಃ ॥ ಉಭಾವಂತೌ ಪರಿಯಾತ ಅರ್ಮ್ಯಾ । ದಿವೋ ನ ರಶ್ಮೀಗ್ಂಸ್ತನುತೋ ವ್ಯರ್ಣವೇ ॥ ಉಭಾ ಭುವಂತೀ ಭುವನಾ ಕವಿಕ್ರತೂ । ಸೂರ್ಯಾ ನ ಚಂದ್ರಾ ಚರತೋ ಹತಾಮತೀ ॥ ಪತೀ ದ್ಯುಮದ್ವಿಶ್ವವಿದಾ ಉಭಾ ದಿವಃ । ಸೂರ್ಯಾ ಉಭಾ ಚಂದ್ರಮಸಾ ವಿಚಕ್ಷಣಾ ॥ ವಿಶ್ವವಾರಾ ವರಿವೋಭಾ ವರೇಣ್ಯಾ । ತಾ ನೋಽವತಂ ಮತಿಮಂತಾ ಮಹಿವ್ರತಾ ॥ ವಿಶ್ವವಪರೀ ಪ್ರತರಣಾ ತರಂತಾ । ಸುವರ್ವಿದಾ ದೃಶಯೇ ಭೂರಿರಶ್ಮೀ ॥ ಸೂರ್ಯಾ ಹಿ ಚಂದ್ರಾ ವಸು ತ್ವೇಷ ದರ್ಶತಾ । ಮನಸ್ವಿನೋಭಾಽನುಚರತೋ ನು ಸಂ ದಿವಂ ॥ ಅಸ್ಯ ಶ್ರವೋ ನದ್ಯಃ ಸಪ್ತ ಬಿಭ್ರತಿ । ದ್ಯಾವಾ ಕ್ಷಾಮಾ ಪೃಥಿವೀ ದರ್ಶತಂ ವಪುಃ ॥ ಅಸ್ಮೇ ಸೂರ್ಯಾಚಂದ್ರಮಸಾಽಭಿಚಕ್ಷೇ । ಶ್ರದ್ಧೇ ಕಮಿಂದ್ರ ಚರತೋ ವಿಚರ್ತುರಂ ॥ ಪೂರ್ವಾಪರಂ ಚರತೋ ಮಾಯಯೈತೌ । ಶಿಶೂ ಕ್ರೀಡಂತೌ ಪರಿಯಾತೋ ಅಧ್ವರಂ ॥ ವಿಶ್ವಾನ್ಯನ್ಯೋ ಭುವನಾಽಭಿಚಷ್ಟೇ । ಋತೂನನ್ಯೋ ವಿದಧಜ್ಜಾಯತೇ ಪುನಃ ॥ ಹಿರಣ್ಯವರ್ಣಾಃ ಶುಚಯಃ ಪಾವಕಾ ಯಾಸು ಜಾತಃ ಕಶ್ಯಪೋ ಯಾಸ್ವಿಂದ್ರಃ । ಅಗ್ನಿಂ ಯಾ ಗರ್ಭಂ ದಧಿರೇ ವಿರೂಪಾಸ್ತಾನ ಆಪಃ ಶಗ್ಂ ಸ್ಯೋನಾ ಭವಂತು ॥ ಯಾಸಾಗ್ಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯಂಜನಾನಾಂ । ಮಧುಶ್ಚುತಃ ಶುಚಯೋ ಯಾಃ ಪಾವಕಾಸ್ತಾನ ಆಪಃ ಶಗ್ಂ ಸ್ಯೋನಾ ಭವಂತು ॥ ಯಾಸಾಂ ದೇವಾ ದಿವಿ ಕೃಣ್ವಂತಿ ಭಕ್ಷಂ ಯಾ ಅಂತರಿಕ್ಷೇ ಬಹುಧಾ ಭವಂತಿ । ಯಾಃ ಪೃಥಿವೀಂ ಪಯಸೋಂಽದಂತಿ ಶುಕ್ರಾಸ್ತಾ ನ ಆಪಃ ಶಗ್ಂ ಸ್ಯೋನಾ ಭವಂತು ॥ ಶಿವೇನ ಮಾ ಚಕ್ಷುಷಾ ಪಶ್ಯತಾಪಃ ಶಿವಯಾ ತನುವೋಽಪ ಸ್ಪೃಶತ ತ್ವಚಂ ಮೇ । ಸರ್ವಾಗ್ಂ ಅಗ್ನೀಗ್ಂರಪ್ಸುಷದೋ ಹುವೇ ವೋ ಮಯಿ ವರ್ಚೋ ಬಲಮೋಜೋ ನಿ

ಧತ್ತ ॥ ಆಪೋ ಭದ್ರಾ ಘೃತಮಿದಾಪ ಆಸುರಗ್ನೀಷೋಮೌ ಬಿಭ್ರತ್ಯಾಪ ಇತ್ತಾಃ । ತೀವ್ರೋ ರಸೋ ಮಧುಪೃಚಾ ಮರಂಗಮ ಆ ಮಾ ಪ್ರಾಣೇನ ಸಹ ವರ್ಚಸಾಗನ್ ॥ ಆದಿತ್ಪಶ್ಯಾಮ್ಯುತ ವಾ ಶೃಣೋಮ್ಯಾ ಮಾ ಘೋಷೋ ಗಚ್ಛತಿ ವಾಙ್ನ ಆಸಾಂ । ಮನ್ಯೇ ಭೇಜಾನೋ ಅಮೃತಸ್ಯ ತರ್ಹಿ ಹಿರಣ್ಯವರ್ಣಾ ಅತೃಪಂ ಯದಾ ವಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## 5.5 ನವಗ್ರಹ ಗಾಯತ್ರಿ ಮಂತ್ರಗಳು

**ಸೂರ್ಯ** - ಓಂ ಆದಿತ್ಯಾಯ ವಿದ್ಮಹೇ । ಸಹಸ್ರಕಿರಣಾಯ ಧೀಮಹಿ । ತನ್ನೋ ಭಾನುಃ ಪ್ರಚೋದಯಾತ್ ॥1॥ ಓಂ ಪ್ರಭಾಕರಾಯ ವಿದ್ಮಹೇ । ದಿವಾಕರಾಯ ಧೀಮಹಿ । ತನ್ನಃ ಸೂರ್ಯಃ ಪ್ರಚೋದಯಾತ್ ॥2॥ ಓಂ ಅಶ್ವಧ್ವಜಾಯ ವಿದ್ಮಹೇ । ಪಾಶಹಸ್ತಾಯ ಧೀಮಹಿ । ತನ್ನಃ ಸೂರ್ಯಃ ಪ್ರಚೋದಯಾತ್ ॥3॥ ಓಂ ಆದಿತ್ಯಾಯ ವಿದ್ಮಹೇ । ಸಹಸ್ರಕರಾಯ ಧೀಮಹಿ । ತನ್ನಃ ಸೂರ್ಯಃ ಪ್ರಚೋದಯಾತ್ ॥4॥ ಓಂ ಭಾಸ್ಕರಾಯ ವಿದ್ಮಹೇ । ಮಹಾತೇಜಾಯ ಧೀಮಹಿ । ತನ್ನಃ ಸೂರ್ಯಃ ಪ್ರಚೋದಯಾತ್ ॥5॥ ಓಂ ಭಾಸ್ಕರಾಯ ವಿದ್ಮಹೇ । ಮಹಾದ್ಯುತಿಕರಾಯ ಧೀಮಹಿ । ತನ್ನಃ ಸೂರ್ಯಃ ಪ್ರಚೋದಯಾತ್ ॥6॥

**ಚಂದ್ರ** - ಓಂ ಕ್ಷೀರಪುತ್ರಾಯ ವಿದ್ಮಹೇ । ಮಹಾಕಾಲಾಯ ಧೀಮಹಿ । ತನ್ನಶ್ಚಂದ್ರಃ ಪ್ರಚೋದಯಾತ್ ॥ ಓಂ ಕ್ಷೀರಪುತ್ರಾಯ ವಿದ್ಮಹೇ । ಅಮೃತತತ್ವಾಯ ಧೀಮಹಿ । ತನ್ನಶ್ಚಂದ್ರಃ ಪ್ರಚೋದಯಾತ್ ॥ ಓಂ ನಿಶಾಕರಾಯ ವಿದ್ಮಹೇ । ಕಲಾನಾಥಾಯ ಧೀಮಹಿ । ತನ್ನಃ ಸೋಮಃ ಪ್ರಚೋದಯಾತ್ ॥

**ಕುಜ** - ಓಂ ವೀರಧ್ವಜಾಯ ವಿದ್ಮಹೇ । ವಿಘ್ನಹಸ್ತಾಯ ಧೀಮಹಿ । ತನ್ನೋ ಭೌಮಃ ಪ್ರಚೋದಯಾತ್ ॥ ಓಂ ಅಂಗಾರಕಾಯ ವಿದ್ಮಹೇ । ಭೂಮಿಪಾಲಾಯ ಧೀಮಹಿ । ತನ್ನಃ ಕುಜಃ ಪ್ರಚೋದಯಾತ್ ॥ ಓಂ ಚಿತ್ರಿಪುತ್ರಾಯ ವಿದ್ಮಹೇ । ಲೋಹಿತಾಂಗಾಯ

ಧೀಮಹಿ । ತನ್ನೋ ಭೌಮಃ ಪ್ರಚೋದಯಾತ್ ॥ ಓಂ ಅಂಗಾರಕಾಯ ವಿದ್ಮಹೇ । ಶಕ್ತಿಹಸ್ತಾಯ ಧೀಮಹಿ । ತನ್ನೋ ಭೌಮಃ ಪ್ರಚೋದಯಾತ್ ॥

**ಬುಧ** - ಓಂ ಗಜಧ್ವಜಾಯ ವಿದ್ಮಹೇ । ಸುಖಹಸ್ತಾಯ ಧೀಮಹಿ । ತನ್ನೋ ಬುಧಃ ಪ್ರಚೋದಯಾತ್ ॥ ಓಂ ಚಂದ್ರಪುತ್ರಾಯ ವಿದ್ಮಹೇ । ರೋಹಿಣೀ ಪ್ರಿಯಾಯ ಧೀಮಹಿ । ತನ್ನೋ ಬುಧಃ ಪ್ರಚೋದಯಾತ್ ॥ ಓಂ ಸೌಮ್ಯರೂಪಾಯ ವಿದ್ಮಹೇ । ವಾಣೇಶಾಯ ಧೀಮಹಿ । ತನ್ನೋ ಬುಧಃ ಪ್ರಚೋದಯಾತ್ ॥

**ಬೃಹಸ್ಪತಿ** - ಓಂ ವೃಷಭಧ್ವಜಾಯ ವಿದ್ಮಹೇ । ಕ್ರುನಿಹಸ್ತಾಯ ಧೀಮಹಿ । ತನ್ನೋ ಗುರುಃ ಪ್ರಚೋದಯಾತ್ ॥ ಓಂ ಸುರಾಚಾರ್ಯಾಯ ವಿದ್ಮಹೇ । ಸುರಶ್ರೇಷ್ಠಾಯ ಧೀಮಹಿ । ತನ್ನೋ ಗುರುಃ ಪ್ರಚೋದಯಾತ್ ॥

**ಶುಕ್ರ** - ಓಂ ಅಶ್ವಧ್ವಜಾಯ ವಿದ್ಮಹೇ । ಧನುರ್ಹಸ್ತಾಯ ಧೀಮಹಿ । ತನ್ನಃ ಶುಕ್ರಃ ಪ್ರಚೋದಯಾತ್ ॥ ಓಂ ರಜದಾಭಾಯ ವಿದ್ಮಹೇ । ಭೃಗುಸುತಾಯ ಧೀಮಹಿ । ತನ್ನಃ ಶುಕ್ರಃ ಪ್ರಚೋದಯಾತ್ ॥ ಓಂ ಭೃಗುಸುತಾಯ ವಿದ್ಮಹೇ । ದಿವ್ಯದೇಹಾಯ ಧೀಮಹಿ । ತನ್ನಃ ಶುಕ್ರಃ ಪ್ರಚೋದಯಾತ್ ॥

**ಶನೈಶ್ಚರ** - ಓಂ ಕಾಕಧ್ವಜಾಯ ವಿದ್ಮಹೇ । ಖಡ್ಗಹಸ್ತಾಯ ಧೀಮಹಿ । ತನ್ನೋ ಮಂದಃ ಪ್ರಚೋದಯಾತ್ ॥ ಓಂ ಶನೈಶ್ಚರಾಯ ವಿದ್ಮಹೇ । ಸೂರ್ಯಪುತ್ರಾಯ ಧೀಮಹಿ । ತನ್ನೋ ಮಂದಃ ಪ್ರಚೋದಯಾತ್ ॥ ಓಂ ಸೂರ್ಯಪುತ್ರಾಯ ವಿದ್ಮಹೇ । ಮೃತ್ಯುರೂಪಾಯ ಧೀಮಹಿ । ತನ್ನಃ ಸೌರಿಃ ಪ್ರಚೋದಯಾತ್ ॥

**ರಾಹು** -ಓಂ ನಾಕಧ್ವಜಾಯ ವಿದ್ಮಹೇ । ಪದ್ಮಹಸ್ತಾಯ ಧೀಮಹಿ । ತನ್ನೋ ರಾಹುಃ ಪ್ರಚೋದಯಾತ್ ॥ ಓಂ ಶಿರೋರೂಪಾಯ ವಿದ್ಮಹೇ । ಅಮೃತೇಶಾಯ ಧೀಮಹಿ । ತನ್ನೋ ರಾಹುಃ ಪ್ರಚೋದಯಾತ್ ॥

**ಕೇತು** - ಓಂ ಅಶ್ವಧ್ವಜಾಯ ವಿದ್ಮಹೇ । ಶೂಲಹಸ್ತಾಯ ಧೀಮಹಿ । ತನ್ನಃ ಕೇತುಃ ಪ್ರಚೋದಯಾತ್ ॥ ಓಂ ಚಿತ್ರವರ್ಣಾಯ ವಿದ್ಮಹೇ । ಸರ್ಪರೂಪಾಯ ಧೀಮಹಿ ।

ತನ್ನಃ ಕೇತುಃ ಪ್ರಚೋದಯಾತ್ ॥ ಓಂ ಗದಾಹಸ್ತಾಯ ವಿದ್ಮಹೇ । ಅಮೃತೇಶಾಯ ಧೀಮಹಿ । ತನ್ನಃ ಕೇತುಃ ಪ್ರಚೋದಯಾತ್ ॥

# 6 ನವಗ್ರಹ ಜಪ ಮಂತ್ರಗಳು

ನವಗ್ರಹ ಜಪಮಂತ್ರಾಃ

## 6.1 ಸೂರ್ಯಃ

ಓಂ ಅಸ್ಯ ಶ್ರೀಸೂರ್ಯಮಹಾಮಂತ್ರಸ್ಯ । ಹಿರಣ್ಯಸ್ತೂಪ ಋಷಿಃ । ತ್ರಿಷ್ಟುಪ್ ಛಂದಃ । ಸೂರ್ಯೋ ದೇವತಾ । ಘೃಣಿರಿತಿ ಬೀಜಂ । ಸೂರ್ಯ ಇತಿ ಶಕ್ತಿಃ । ಆದಿತ್ಯ ಇತಿ ಕೀಲಕಂ । ಸೂರ್ಯಗ್ರಹ ಪ್ರಸಾದಸಿದ್ಧ್ಯರ್ಥೇ ಜಪೇ ವಿನಿಯೋಗಃ ॥

ಓಂ ಸೂರ್ಯಾಯ ಅಂಗುಷ್ಠಾಭ್ಯಾಂ ನಮಃ । ಹೃದಯಾಯ ನಮಃ ॥ ಓಂ ತೇಜೋಮೂರ್ತಯೇ ತರ್ಜನೀಭ್ಯಾಂ ನಮಃ । ಶಿರಸೇ ಸ್ವಾಹಾ ॥ ಓಂ ವರದಾಯ ಮಧ್ಯಮಾಭ್ಯಾಂ ನಮಃ । ಶಿಖಾಯೈ ವಷಟ್ ॥ ಓಂ ಹಂಸಾಯ ಅನಾಮಿಕಾಭ್ಯಾಂ ನಮಃ । ಕವಚಾಯ ಹುಂ ॥ ಓಂ ಶಾಂತಾಯ ಕನಿಷ್ಠಿಕಾಭ್ಯಾಂ ನಮಃ । ನೇತ್ರತ್ರಯಾಯ ವೌಷಟ್ ॥ ಓಂ ಕರ್ಮಸಾಕ್ಷಿಣೇ ಕರತಲಕರಪೃಷ್ಠಾಭ್ಯಾಂ ನಮಃ । ಅಸ್ತ್ರಾಯ ಫಟ್ ॥ ಓಂ ಭೂರ್ಭುವಸ್ಸುವರೋಂ । ಇತಿ ದಿಗ್ಬಂಧಃ ॥

ಧ್ಯಾನಂ । ಧೃತಪದ್ಮದ್ವಯಂ ಭಾನುಂ ತೇಜೋಮಂಡಲಮಧ್ಯಗಂ । ಸರ್ವಾಧಿವ್ಯಾಧಿಶಮನಂ ಛಾಯಾಶ್ಲಿಷ್ಟತನುಂ ಭಜೇ ॥ 1॥

ಪದ್ಮಾಸನಃ ಪದ್ಮಕರೋ ದ್ವಿಬಾಹುಃ ಪದ್ಮದ್ಯುತಿಃ ಸಪ್ತತುರಂಗವಾಹಃ । ದಿವಾಕರೋ ಲೋಕಗುರುಃ ಕಿರೀಟೀ ಮಯಿ ಪ್ರಸಾದಂ ವಿದಧಾತು ದೇವಃ ॥ 2॥

ದ್ವಿಭುಜಂ ಪದ್ಮಹಾರಂ ಚ ವರದಂ ಮಕುಟಾನ್ವಿತಂ । ಧ್ಯಾಯೇದ್ದಿವಾಕರಂ ದೇವಂ ಸರ್ವಾಭೀಷ್ಟಫಲಪ್ರದಂ ॥ 3॥

ಓಂ ಲಂ ಪೃಥಿವ್ಯಾತ್ಮನೇ ನಮಃ । ಗಂಧಂ ಕಲ್ಪಯಾಮಿ ॥ ಓಂ ಹಂ ಆಕಾಶಾತ್ಮನೇ ನಮಃ । ಪುಷ್ಪಂ ಕಲ್ಪಯಾಮಿ ॥ ಓಂ ಯಂ ವಾಯವಾತ್ಮನೇ ನಮಃ । ಧೂಪಂ ಕಲ್ಪಯಾಮಿ ॥ ಓಂ ರಂ ತೇಜೋಮಯಾತ್ಮನೇ ನಮಃ । ದೀಪಂ ಕಲ್ಪಯಾಮಿ ॥ ಓಂ ಅಂ ಅಮೃತಾತ್ಮನೇ ನಮಃ । ನೈವೇದ್ಯಂ ಕಲ್ಪಯಾಮಿ ॥ ಆವಾಹಿತ ದೇವತಾಭ್ಯೋ ನಮಃ । ಪಂಚೋಪಚಾರ ಪೂಜಾಂ ಸಮರ್ಪಯಾಮಿ ॥

ಮೂಲಮಂತ್ರಃ - ಓಂ ಆಸತ್ಯೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ । ಹಿರಣ್ಯಯೇನ ಸವಿತಾರಥೇನಾದೇವೋ ಯಾತಿ ಭುವನಾವಿಪಶ್ಯನ್ ॥ (ಯಥಾಶಕ್ತಿ ಜಪೇತ್)

ಬೀಜ ಮಂತ್ರ – ಓಂ ಕ್ಲೀಂ ಐಂ ಶ್ರೀಂ ಹ್ರೀಂ ಸೂರ್ಯಾಯ ನಮಃ ॥

ಓಂ ಹ್ರಾಂ ಹ್ರೀಂ ಹ್ರೌಂ ಸಃ ಸೂರ್ಯಾಯ ನಮಃ ॥

ಓಂ ಘೃಣಿಃ ಸೂರ್ಯ ಆದಿತ್ಯಃ ॥

ಓಂ ಹ್ಸೌಃ ಶ್ರೀಂ ಆಂ ಗ್ರಹಾಧಿರಾಜಾಯ ಆದಿತ್ಯಾಯ ಸ್ವಾಹಾ ॥

ಓಂ ಸೂರ್ಯಾಯ ಅಂಗುಷ್ಠಾಭ್ಯಾಂ ನಮಃ । ಹೃದಯಾಯ ನಮಃ ॥ ಓಂ ತೇಜೋಮೂರ್ತಯೇ ತರ್ಜನೀಭ್ಯಾಂ ನಮಃ । ಶಿರಸೇ ಸ್ವಾಹಾ ॥ ಓಂ ವರದಾಯ ಮಧ್ಯಮಾಭ್ಯಾಂ ನಮಃ । ಶಿಖಾಯೈ ವಷಟ್ ॥ ಓಂ ಹಂಸಾಯ ಅನಾಮಿಕಾಭ್ಯಾಂ ನಮಃ । ಕವಚಾಯ ಹುಂ ॥ ಓಂ ಶಾಂತಾಯ ಕನಿಷ್ಠಿಕಾಭ್ಯಾಂ ನಮಃ । ನೇತ್ರತ್ರಯಾಯ ವೌಷಟ್ ॥ ಓಂ ಕರ್ಮಸಾಕ್ಷಿಣೇ ಕರತಲಕರಪೃಷ್ಠಾಭ್ಯಾಂ ನಮಃ । ಅಸ್ತ್ರಾಯ ಫಟ್ ॥ ಓಂ ಭೂರ್ಭುವಸ್ಸುವರೋಂ । ಇತಿ ದಿಗ್ವಿಮೋಚಕಃ ॥

ಧ್ಯಾನಂ । ಧೃತಪದ್ಮದ್ವಯಂ ಭಾನುಂ ತೇಜೋಮಂಡಲಮಧ್ಯಗಂ । ಸರ್ವಾಧಿವ್ಯಾಧಿಶಮನಂ ಛಾಯಾಶ್ಲಿಷ್ಟತನುಂ ಭಜೇ ॥ 1॥

ಪದ್ಮಾಸನಃ ಪದ್ಮಕರೋ ದ್ವಿಬಾಹುಃ ಪದ್ಮದ್ಯುತಿಃ ಸಪ್ತತುರಂಗವಾಹಃ । ದಿವಾಕರೋ ಲೋಕಗುರುಃ ಕಿರೀಟೀ ಮಯಿ ಪ್ರಸಾದಂ ವಿದಧಾತು ದೇವಃ ॥ 2॥

ದ್ವಿಭುಜಂ ಪದ್ಮಹಾರಂ ಚ ವರದಂ ಮಕುಟಾನ್ವಿತಂ । ಧ್ಯಾಯೇದ್ದಿವಾಕರಂ ದೇವಂ ಸರ್ವಾಭೀಷ್ಟಫಲಪ್ರದಂ ॥ 3॥

ಓಂ ಲಂ ಪೃಥಿವ್ಯಾತ್ಮನೇ ನಮಃ । ಗಂಧಂ ಕಲ್ಪಯಾಮಿ ॥ ಓಂ ಹಂ ಆಕಾಶಾತ್ಮನೇ ನಮಃ । ಪುಷ್ಪಂ ಕಲ್ಪಯಾಮಿ ॥ ಓಂ ಯಂ ವಾಯವಾತ್ಮನೇ ನಮಃ । ಧೂಪಂ ಕಲ್ಪಯಾಮಿ ॥ ಓಂ ರಂ ತೇಜೋಮಯಾತ್ಮನೇ ನಮಃ । ದೀಪಂ ಕಲ್ಪಯಾಮಿ ॥ ಓಂ ಅಂ ಅಮೃತಾತ್ಮನೇ ನಮಃ । ನೈವೇದ್ಯಂ ಕಲ್ಪಯಾಮಿ ॥ ಆವಾಹಿತ ದೇವತಾಭ್ಯೋ ನಮಃ । ಪಂಚೋಪಚಾರ ಪೂಜಾಂ ಸಮರ್ಪಯಾಮಿ ॥

## 6.2 ಚಂದ್ರಃ

ಓಂ ಅಸ್ಯ ಶ್ರೀಸೋಮಮಹಾಮಂತ್ರಸ್ಯ । ಗೌತಮ ಋಷಿಃ । ಗಾಯತ್ರೀ ಛಂದಃ । ಸೋಮೋ ದೇವತಾ । ಸಾಂ ಬೀಜಂ । ಸೀಂ ಶಕ್ತಿಃ । ಸೂಂ ಕೀಲಕಂ । ಮಮ ಶ್ರೀಸೋಮಗ್ರಹಪ್ರಸಾದಸಿದ್ಧ್ಯರ್ಥೇ ಜಪೇ ವಿನಿಯೋಗಃ ॥

ಓಂ ಸೋಮಾಯ ಅಂಗುಷ್ಠಾಭ್ಯಾಂ ನಮಃ । ಹೃದಯಾಯ ನಮಃ ॥ ಓಂ ನಿಶಾಕರಾಯ ತರ್ಜನೀಭ್ಯಾಂ ನಮಃ । ಶಿರಸೇ ಸ್ವಾಹಾ ॥ ಓಂ ಕ್ಷೀರೋದಾರ್ಣವಸಂಭವಾಯ ಮಧ್ಯಮಾಭ್ಯಾಂ ನಮಃ । ಶಿಖಾಯೈ ವಷಟ್ ॥ ಓಂ ಲಕ್ಷ್ಮೀಸಹೋದರಾಯ ಅನಾಮಿಕಾಭ್ಯಾಂ ನಮಃ । ಕವಚಾಯ ಹುಂ ॥ ಓಂ ತಾರಕೇಶಾಯ ಕನಿಷ್ಠಿಕಾಭ್ಯಾಂ ನಮಃ । ನೇತ್ರತ್ರಯಾಯ ವೌಷಟ್ ॥ ಓಂ ಸುಧಾಮೂರ್ತಯೇ ಕರತಲಕರಪೃಷ್ಠಾಭ್ಯಾಂ ನಮಃ । ಅಸ್ತ್ರಾಯ ಫಟ್ ॥ ಓಂ ಭೂರ್ಭುವಸ್ಸುವರೋಂ । ಇತಿ ದಿಗ್ಬಂಧಃ ॥

ಧ್ಯಾನಂ । ಗದಾಧರಧರಂ ದೇವಂ ಶ್ವೇತವರ್ಣಂ ನಿಶಾಕರಂ । ಧ್ಯಾಯೇದಮೃತಸಂಭೂತಂ ಸರ್ವಕಾಮಫಲಪ್ರದಂ ॥

ಓಂ ಲಂ ಪೃಥಿವ್ಯಾತ್ಮನೇ ನಮಃ । ಗಂಧಂ ಕಲ್ಪಯಾಮಿ ॥ ಓಂ ಹಂ ಆಕಾಶಾತ್ಮನೇ ನಮಃ । ಪುಷ್ಪಂ ಕಲ್ಪಯಾಮಿ ॥ ಓಂ ಯಂ ವಾಯವಾತ್ಮನೇ ನಮಃ । ಧೂಪಂ ಕಲ್ಪಯಾಮಿ ॥ ಓಂ ರಂ ತೇಜೋಮಯಾತ್ಮನೇ ನಮಃ । ದೀಪಂ ಕಲ್ಪಯಾಮಿ ॥ ಓಂ

